



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 37

| | | | | |
|---|---|---|---|---|
| ಸಂಪುಟ: ೦೪ ಸಂಚಿಕೆ: ೧೧ | ಫೆಬ್ರವರಿ ೨೦೧೮ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
| Vol. 04 Issue 11 | February 2018 | Pages - 8 | A. Sub. - Rs. 20/- | Editor : Sri. B.R. Ravindranath |


# ಶ್ರೀಸಾಹಿತ್ಯ ಪ್ರಶಸ್ತಿ ಪ್ರದಾನ

**ಪ್ರಶಸ್ತಿ ಪುರಸ್ಕೃತರು : ಡಾ. ಎಲ್.ಎಸ್. ಶೇಷಗಿರಿರಾವ್**
**ಪ್ರಶಸ್ತಿ ಪ್ರದಾನ :ಶ್ರೀ ಹೆಚ್ ಎಸ್ ದೊರೆಸ್ವಾಮಿ**
**ಅಧ್ಯಕ್ಷತೆ :ಪ್ರೊ|| ಎಂ.ಎಚ್. ಕೃಷ್ಣಯ್ಯ**
**ಸ್ಥಳ: ಪ್ರೊ ಎಲ್.ಎಸ್. ಶೇಷಗಿರಿರಾವ್ ಅವರ ಮನೆ**

ಶ್ರೀಮಾನ್ ಬಿ.ಎಂ.ಶ್ರೀಕಂಠಯ್ಯನವರ ನೇರಶಿಷ್ಯ ವರ್ಗದ ಮತ್ತು ಬಿ.ಎಂ.ಶ್ರೀಯವರ ಸಲಹೆಯಂತೆ ಕನ್ನಡದಲ್ಲಿ ಬರೆಯುವ ನಿರ್ಧಾರ ಮಾಡಿದ ಪ್ರೊ.ಎಲ್. ಎಸ್. ಶೇಷಗಿರಿರಾವ್ ಅವರು ಬಿ.ಎಂ.ಶ್ರೀ ಪ್ರತಿಷ್ಠಾನವು ಪ್ರದಾನ ಮಾಡುವ ಮೌಲಿಕ 'ಶ್ರೀಸಾಹಿತ್ಯ' ಪ್ರಶಸ್ತಿಗೆ ಭಾಜನರಾಗಿದ್ದು, ಶೇಷಗಿರಿರಾವ್ ಅವರಿಗಲ್ಲದೆ, ನಮಗೆಲ್ಲರಿಗೂ ಬಹಳ ಹೆಮ್ಮೆಯ ವಿಷಯವಾಗಿದೆ. ಬಿಎಂಶ್ರೀ ಪ್ರತಿಷ್ಠಾನದ ಇತಿಹಾಸದಲ್ಲಿ ಈ ಸಮಾರಂಭವು ಒಂದು ಐತಿಹಾಸಿಕ ದಿನವೆನ್ನಬಹುದು, ಕಾರಣ ಪ್ರೊ.ಎಲ್.ಎಸ್. ಶೇಷಗಿರಿರಾವ್ ಅವರು ಪ್ರತಿಷ್ಠಾನದ ಅಧ್ಯಕ್ಷರಾಗಿಯೂ ಎರಡು ವರ್ಷಗಳ ಕಾಲ ಸೇವೆಸಲ್ಲಿಸಿದ್ದಾರೆ. ಕನ್ನಡ ಸಾರಸ್ವತ ಲೋಕದಲ್ಲಿ ವಿಮರ್ಶೆಯ ದೃಷ್ಟಿಯಿಂದ ಶ್ರೀ ಶೇಷಗಿರಿರಾವ್ ಅವರ ಕೃತಿಗಳೆಲ್ಲವೂ ಬಹಳ ಮೌಲ್ಯಯುತವಾದವು. ಇಂಗ್ಲೀಷ್ ಬೋಧಿಸುತ್ತಾ, ಕನ್ನಡದಲ್ಲಿ ಹೆಸರು ಮಾಡಿದ ಗಣ್ಯಸಾಹಿತಿಗಳ ಸಾಲಿಗೆ ಸೇರಿದ ವಿಮರ್ಶಕರಲ್ಲಿ ಶ್ರೀ ಶೇಷಗಿರಿರಾವ್ ಅವರೂ ಒಬ್ಬರು. ಕನ್ನಡ ಪುಸ್ತಕ ಪ್ರಾಧಿಕಾರದ ಮೊಟ್ಟ ಮೊದಲ ಅಧ್ಯಕ್ಷರಾಗಿ ಸೇವೆ ಸಲ್ಲಿಸದ್ದಾರೆ.

೨ನೇ ಪುಟಕ್ಕೆ






**ಚಂದಾ ವಿವರಗಳು**
ವಾರ್ಷಿಕ ಚಂದಾ
ರೂ. ೨೦/–
ಐದು ವರ್ಷಗಳ ಚಂದಾ
ರೂ. ೧೦೦/–


ವಿಳಾಸ
**ಬಿ.ಎಂ.ಶ್ರೀ. ಪ್ರತಿಷ್ಠಾನ**
ಸ್ಥಾಪನೆ : ೦೬-೦೫-೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಮಧ್ಯಾಹ್ನ 12–30ರಿಂದ ಸಂಜೆ 7–00ಗಂಟೆ.
ವಾರದ ರಜೆ: ಮಂಗಳವಾರ

## ಫೆಬ್ರವರಿ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಹೆಚ್ ತಿಪ್ಪೇರುದ್ರ ಸ್ವಾಮಿ | ೦೩-೨-೧೯೨೮ |
| ಬಿಜಿ ಎಲ್ ಸ್ವಾಮಿ | ೦೫-೦೨-೧೯೧೬ |
| ಹಾ.ಮಾ ನಾಯಕ್ | ೦೫-೦೨-೧೯೩೧ |
| ಡಾ. ಆ.ನೆ. ಉಪಾಧ್ಯ | ೦೬-೦೨-೧೯೦೬ |
| ಜಿ.ಎಸ್. ಶಿವರುದ್ರಪ್ಪ | ೦೭-೦೨-೧೯೨೬ |
| ಎಸ್.ವಿ. ಪರಮೇಶ್ವರ ಭಟ್ಟ | ೦೮-೦೨-೧೯೧೪ |
| ಸಿಂಪಿ ಲಿಂಗಣ್ಣ | ೧೦-೦೨-೧೯೦೫ |
| ಎಚ್‌ಎಲ್ ನಾಗೇಗೌಡ | ೧೧-೦೨-೧೯೧೫ |
| ಎ.ಆರ್. ಕೃಷ್ಣಶಾಸ್ತ್ರಿ | ೧೨-೦೨-೧೮೯೦ |
| ಎಂ.ಗೋಪಾಲ ಕೃಷ್ಣ ಅಡಿಗ | ೧೮-೦೨-೧೯೧೮ |
| ಹರ್ಡೇಕರ ಮಂಜಪ್ಪ | ೧೮-೦೨-೧೮೮೯ |
| ಡಿ.ಆರ್. ನಾಗರಾಜ್ | ೨೦-೦೨-೧೯೫೪ |
| ಪಂಜೆ ಮಂಗೇಶರಾವ್ | ೨೨-೦೨-೧೮೭೪ |

## ಫೆಬ್ರವರಿ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಎ.ಆರ್. ಕೃಷ್ಣಶಾಸ್ತ್ರಿ | ೦೧-೦೨-೧೯೬೮ |
| ನಾ. ಕಸ್ತೂರಿ ಸಂಸ | ೧೪-೦೨-೧೯೩೯ |
| ಎಸ್.ವಿ. ರಂಗಣ್ಣ | ೧೮-೦೨-೧೯೮೭ |
| ರಂ.ಶ್ರೀ ಮುಗಳಿ | ೨೦-೦೨-೧೯೯೩ |
| ಟಿ.ಎಸ್. ವೆಂಕಣ್ಣಯ್ಯ | ೨೪-೦೨-೧೯೩೯ |
| ಆಲೂರು ವೆಂಕಟರಾಯರು | ೨೫-೦೨-೧೯೬೪ |

# ಪ್ರಕಟಣೆಗಳು

**1. 'ಶ್ರೀ ವಿ. ನಾಗರಾಜರಾವ್ ಸಮೂಹ ಮಾಧ್ಯಮ ಪ್ರಶಸ್ತಿ'**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಕೊಡಮಾಡುವ 2018ರ 'ಶ್ರೀ ವಿ.ನಾಗರಾಜರಾವ್ ಸಮೂಹ ಮಾಧ್ಯಮ ಪ್ರಶಸ್ತಿ'ಗೆ ಹಿರಿಯ ಪತ್ರಕರ್ತ ಶ್ರೀ ಜಿ.ಎನ್. ರಂಗನಾಥರಾವ್ ಅವರು ಸೂಕ್ತರೆಂದು ಆಯ್ಕೆ ಸಮಿತಿಯು ಆಯ್ಕೆ ಮಾಡಿದೆ. ರೂ. 10,000/–ನಗದು ಹಾಗೂ ಸ್ಮರಣಿಕೆಗಳನ್ನೊಳಗೊಂಡ ಈ ಪ್ರಶಸ್ತಿಯನ್ನು ತಾ॥ 23–02–2018ರಂದು ನಡೆಯಲಿರುವ ಪ್ರತಿಷ್ಠಾನದ ಸಮಾರಂಭದಲ್ಲಿ ಪ್ರದಾನ ಮಾಡಲಾಗುವುದು. ಆಯ್ಕೆ ಸಮಿತಿಯ ಸದಸ್ಯರು : ಡಾ.ಬಸವರಾಜ ಸಾದರ ಮತ್ತು ಡಾ. ಆರ್. ಪೂರ್ಣಿಮಾ

**2. 'ಪ್ರೊ.ಎಲ್.ಎಸ್. ಶೇಷಗಿರಿರಾವ್ ಸಾಹಿತ್ಯ ವಿಮರ್ಶಾ ಪ್ರಶಸ್ತಿ'**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಹಿಂದಿನ ಅಧ್ಯಕ್ಷರು ಹಾಗೂ ಪ್ರಸಿದ್ಧ ಸಾಹಿತಿ ಪ್ರೊ. ಎಲ್.ಎಸ್.ಶೇಷಗಿರಿರಾವ್ ದತ್ತಿ ವತಿಯಿಂದ ಪ್ರತಿಷ್ಠಾನವು ಕೊಡಮಾಡುವ 'ವಿಮರ್ಶಕ ಪ್ರಶಸ್ತಿ'ಯನ್ನು ವಿಮರ್ಶಾ ಕ್ಷೇತ್ರದಲ್ಲಿ ಗಣನೀಯ ಕೊಡುಗೆ ನೀಡಿರುವ ವಿಮರ್ಶಕರೊಬ್ಬರಿಗೆ ನೀಡಲು ತೀರ್ಮಾನಿಸಿದ್ದು ಆ ಕ್ಷೇತ್ರದಲ್ಲಿನ ಅವರ ಕೊಡುಗೆ ವಿಶಿಷ್ಟವೆಂದು ಆಯ್ಕೆ ಸಮಿತಿಯು ಪರಿಗಣಿಸಿ ಈ ವರ್ಷದ ಪ್ರಶಸ್ತಿಗೆ ಡಾ॥ ಎಚ್.ಎಸ್.ರಾಘವೇಂದ್ರರಾವ್ ಅವರನ್ನು ಆಯ್ಕೆ ಮಾಡಿದೆ. ಪ್ರಶಸ್ತಿಯು ರೂ. 10,000/–ನಗದನ್ನು ಒಳಗೊಂಡಿದೆ. ಪ್ರತಿಷ್ಠಾನದ ಸಭಾಂಗಣದಲ್ಲಿ 23–2–2018ರಂದು ನಡೆಯಲಿರುವ ಸಮಾರಂಭದಲ್ಲಿ ಪ್ರಶಸ್ತಿ ಪ್ರದಾನ ಮಾಡಲಾಗುವುದು. ಆಯ್ಕೆ ಸಮಿತಿಯ ಸದಸ್ಯರು : ಡಾ. ಲೋಕೇಶ್ವರಪ್ಪ ಕೆ.ಬಿ ಮತ್ತು ಡಾ. ಪಿ. ಚಂದ್ರಿಕಾ

**ಒಂದನೇ ಪುಟದಿಂದ**

ವಯೋಸಹಜವಾದ ಕಾರಣಗಳಿಂದ, ಪ್ರಶಸ್ತಿಪ್ರದಾನ ಮಾಡುವ ಕಾರ್ಯಕ್ರಮವು ಜೆ.ಪಿ.ನಗರದಲ್ಲಿ ಅವರ ಸ್ವಗೃಹದಲ್ಲೇ ನೆರವೇರಿತು. ಶೇಷಗಿರಿರಾವ್ ಅವರ ಅಭಿಮಾನಿಗಳು, ವಿದ್ಯಾರ್ಥಿಗಳು, ಅವರ ಬಂಧು ವರ್ಗ ಮತ್ತು ಕನ್ನಡ ವಿದ್ವತ್ ಲೋಕದ ಗಣ್ಯರು ಸಮಾರಂಭದಲ್ಲಿ ಹಾಜರಿದ್ದು, ಕಾರ್ಯಕ್ರಮ ಯಶಸ್ವಿಯಾಗಿ ನೆರವೇರಿತು. ಪ್ರಶಸ್ತಿ ಪ್ರದಾನ ಮಾಡಿದವರು, ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಮತ್ತು ಶತಾಯುಷಿ ಶ್ರೀಮಾನ್ ಎಚ್.ಎಸ್.ದೊರೆಸ್ವಾಮಿ. ಶ್ರೀ ಶೇಷಗಿರಿರಾವ್ ಅವರು 'ಶ್ರೀ ಸಾಹಿತ್ಯ' ಪ್ರಶಸ್ತಿಯನ್ನು ಕೃತಜ್ಞತಾ ಪೂರ್ವಕವಾಗಿ ಸ್ವೀಕರಿಸಿದ ಸಂದರ್ಭದಲ್ಲಿ ತಮ್ಮ ಭಾವನೆಗಳನ್ನು ಮತ್ತು ಅನಿಸಿಕೆಗಳನ್ನು ಪತ್ನಿ ಶ್ರೀಮತಿ ಭಾರತಿ ಅವರ ಮೂಲಕ ಹಂಚಿಕೊಂಡಿರುವ ಭಾಗವನ್ನು ಇದೇ ಸಂಚಿಕೆ ಪುಟ ಸಂಖ್ಯೆ ೬–೭ರಲ್ಲಿ ನೀಡಲಾಗಿದೆ. ಪ್ರಶಸ್ತಿಪ್ರದಾನ ಮಾಡಿದ ಶತಾಯುಷಿ ಶ್ರೀ ಎಚ್. ಎಸ್. ದೊರೆಸ್ವಾಮಿಯವರು, ಶ್ರೀ ಶೇಷಗಿರಿರಾವ್ ಅವರ ಒಡನಾಡಿಗಳು. ಆಚಾರ್ಯ ಬಿ.ಎಂ.ಶ್ರೀ ಅವರ ನೇರ ಶಿಷ್ಯನಿಗೆ ಸಲುತ್ತಿರುವ ಶ್ರೀ ಸಾಹಿತ್ಯ ಪ್ರಶಸ್ತಿ, ಅವರು ಕನ್ನಡ ಸಾಹಿತ್ಯಕ್ಕೆ ನೀಡಿದ ಬಹುಮುಖಿ ಕೊಡುಗೆಗಳಿಗೆ ಘನತೆಯನ್ನು ಕಟ್ಟಿ ಕೊಟ್ಟಿದೆ ಎಂದು ಅಭಿಪ್ರಾಯ ಪಟ್ಟರು.

ಪ್ರತಿಷ್ಠಾನದ ಗೌರವಧ್ಯಕ್ಷರಾದ ಪ್ರೊ.ಎಂ.ಎಚ್. ಕೃಷ್ಣಯ್ಯ ಅವರು ತಮ್ಮ ಮತ್ತು ಶೇಷಗಿರಿರಾಯರೊಡನಿದ್ದ ಮಧುರ ಭಾಂದವ್ಯಗಳನ್ನು ನೆನಪಿಸಿಕೊಂಡರು. ವಿಮರ್ಶಾಕ್ಷೇತ್ರದಲ್ಲಿನ ಅವರ ಸಾಧನೆ, ನಿಘಂಟು ಕ್ಷೇತ್ರಕ್ಕೆ ಅವರ ಕೊಡುಗೆ, ಮಕ್ಕಳ ಸಾಹಿತ್ಯದ ಕ್ಷೇತ್ರದಲ್ಲಿ ಅವರ ಕೊಡುಗೆ ಮತ್ತು ಅವರ ಮುಖ್ಯ ಕೆಲವು ಕೃತಿಗಳನ್ನು ನೆನಪಿಸಿಕೊಂಡರು.

ಶ್ರೀಮತಿ ವಾಣಿ ಶ್ರೀಶ ಅವರು ಬಿಎಂಶ್ರೀಯವರ "ಕರುಣಾಳು ಬಾ ಬೆಳಕೆ" ಗೀತೆಯನ್ನು ಹಾಡಿ, ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಡಾ. ಪಿ.ವಿ.ನಾರಾಯಣ ಪ್ರಾಸ್ತಾವಿಕ ನುಡಿಗಳನ್ನಾಡಿ, ಸರ್ವರನ್ನೂ ಸ್ವಾಗತಿಸಿದರು.ಬಿಎಂಶ್ರೀಯವರ ಮೊಮ್ಮಗಳಾದ ಶ್ರೀಮತಿ ಕಮಲಿನಿ ಶಾ. ಬಾಲುರಾವ್ ಪ್ರಶಸ್ತಿಯ ದತ್ತಿ ದಾನಿಗಳು ಸಹ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ಪ್ರಶಸ್ತಿಯ ಅಭಿನಂದನ ಪತ್ರವನ್ನು ಡಾ.ವಿಜಯಾಸುಬ್ಬರಾಜ್, ಅವರು ವಾಚನಮಾಡಿದರು. ಶ್ರೀ ರವೀಂದ್ರನಾಥ್ ಅವರು ಕಾರ್ಯಕ್ರಮ ನಿರೂಪಣೆ ಮಾಡಿದರು. ಡಾ.ಅನಿಲ್ ಕುಮಾರ್ ಅವರ ವಂದನಾರ್ಪಣೆಯೊಂದಿಗೆ ಕಾಯಕ್ರಮ ಮುಕ್ತಾಯಗೊಂಡಿತು.




**ಬಿ.ಎಂ.ಶ್ರೀ ಪ್ರತಿಷ್ಠಾನದಷಾಣ್ಮಾಸಿಕ ವಿದ್ವತ್ ಪತ್ರಿಕೆಯಾದ ಲೋಚನದ ಜುಲೈ – ಡಿಸೆಂಬರ್ ೨೦೧೭ ಆವೃತ್ತಿ (ಸಂಪುಟ:೩೧, ಸಂಚಿಕೆ:೦೨) ಬಿಡುಗಡೆಯಾಗಿರುತ್ತದೆ.**

ಈ ಸಂಚಿಕೆಯಲ್ಲಿ ಪ್ರಕಟಗೊಂಡಿರುವ ಲೇಖನಗಳು:

೧. ಶ್ರವಣಬೆಳಗೊಳದ ಬಾಹುಬಲಿ – ಡಾ. ಅಪ್ಪಣ್ಣ ಎನ್. ಹಂಜೆ
೨. ರಾಧೆ ಯಾರು ?– ಒಂದು ಚರ್ಚೆ – ಡಾ. ವಿಜಯಾ ಸುಬ್ಬರಾಜ್
೩. 'ರಕ್ತವದನಂ' – ಒಂದು ಅವಲೋಕನ – ಎಸ್. ಬಿಳಿಗಿರಿವಾಸನ್
೪. ಹತ್ತನೆಯ ಶತಮಾನದ ಕನ್ನಡ–ತೆಲುಗು ದ್ವಿಭಾಷಿಕ ಶಾಸನಗಳ ಸ್ವರೂಪ
೫. ಮನುಶ್ಯ ಸಮ್ಮಂದಗಳ ಬಂದ – ಎಂ.ಜಿ.ವಾರಿ
೬. ಯಾದಗಿರಿ ಪರಿಸರದ ಮಾದಿಗರ ಸಾಂಸ್ಕೃತಿಕ ನಡವಳಿ – ಆಜಪ್ಪ ಬಾಬು ಕಂಬಾರ
೭. ವಚನಕಾರರು ಮತ್ತು ಪಾಂಚಾಳ ಕುಲಕಸುಬುಗಳು – ಡಾ. ವೀರೇಶ ಬಡಿಗೇರ
೮. ಕೃಷ್ಣಕರ್ಣಾಮೃತದಲ್ಲಿ ಶಬ್ದಚಿತ್ರಗಳು – ಡಾ. ಎಚ್.ಎಸ್. ಅನಂತನಾರಾಯಣ
೯. ಟಿ,ಪಿ. ಕೈಲಾಸಂ ಅವರ 'ಟೊಳ್ಳು–ಗಟ್ಟಿ'ಯಲ್ಲಿ ಆಧುನಿಕ ಶಿಕ್ಷಣ ಕ್ರಮದ ವಿಡಂಬನೆ – ಎಚ್.ಎನ್. ಮುರಳೀಧರ
೧೦. ಆನಂದ ಲಹರಿಯನ್ನೋದಿದ ಆನಂದ – ಸಂಧ್ಯಾಭಟ್
೧೧. ವಾಙ್ಮಯ ತಪಸ್ವಿ ರಾಮಚಂದ್ರ ವಿಟ್ಠಲದಾಸರು
೧೨. ಲಾಲ್‌ಬಾಗ್‌ನ ಪ್ರಾಚೀನ ವೀರ–ಮಾಸ್ತಿ ಸ್ಮಾರಕಗಳು –ಡಾ.ಮುತ್ತುರಾಜು
೧೩. ವಿಜಯನಗರ ಮತ್ತು ಚೀನಾ– ಡಾ. ಕೆಳದಿ ಗುಂಡಾಜೋಯಿಸ್
೧೪. ಕರ್ಪೂರ ಶ್ರೀನಿವಾಸರಾಯರು – ಜಿ.ಎನ್. ನರಸಿಂಹಮೂರ್ತಿ

# ಫೆಬ್ರವರಿ ೨೦೧೮ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು
## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ

### ೦೭-೦೨-೨೦೧೮ ಬುಧವಾರ ಸಂಜೆ- ೫-೩೦ ಗಂಟೆಗೆ




**ಗಮಕವಾಹಿನಿ - ಸಮಾರೋಪ ಕಾರ್ಯಕ್ರಮ**

ಗಮಕವಾಹಿನಿ-೨೫

'ಪಂಪಭಾರತ' ಸಂಚಿಕೆ- ೧೨ (ಮುಂದುವರೆದ ಭಾಗ)

ವಾಚನ : ಶ್ರೀ ಅಭಿರಾಮ್ ಭರತವಂಶಿ

ವ್ಯಾಖ್ಯಾನ : ಕರ್ನಾಟಕ ಕಲಾಶ್ರೀ/ ತೆಕ್ಕೆಕೆರೆ ಸುಬ್ರಮಣ್ಯಭಟ್ಟ

ನೇತೃತ್ವ- ಶ್ರೀಮತಿ ಸಿ.ವಿ. ಶ್ರೀಮತಿ

### ೧೨-೦೨-೨೦೧೮ ಸೋಮವಾರ ಸಂಜೆ ೬-೦೦ ಗಂಟೆಗೆ

**ಪಂಡಿತ ಓ.ಆರ್. ರಾಮಣ್ಣ ಮತ್ತು ಶ್ರೀಮತಿ ಪುಟ್ಟಮ್ಮ ದತ್ತಿ ಉಪನ್ಯಾಸ**

ಉಪನ್ಯಾಸ : ಡಾ.ನೀ.ಕೃ.ರಾಮಶೇಷನ್

(ಖ್ಯಾತ ವಿದ್ಯಾಂಸರು)

ವಿಷಯ : ತೊರವೆ ರಾಮಾಯಣ.

### ೧೫-೦೨-೨೦೧೮ ಗುರುವಾರ ಸಂಜೆ - ೬-೦೦ಗಂಟೆಗೆ

**ಆ.ನೇ. ಉಪಾಧ್ಯೆ, ಡಿ.ಎಲ್.ಎನ್, ಎಂ.ಜಿ. ನಂಜುಂಡಾರಾಧ್ಯ, ಸೋಸಲೆ ಅಯ್ಯಾಶಾಸ್ತ್ರಿ ದತ್ತಿ ಉಪನ್ಯಾಸ**

ಉಪನ್ಯಾಸ : ಶ್ರೀ ಬಿಳಿಗಿರಿವಾಸನ್

(ನಿವೃತ್ತ : ಕನ್ನಡ ಪ್ರಾಧ್ಯಾಪಕರು, ವಿದ್ವಾಂಸರು)

ವಿಷಯ : ಕನ್ನಡ ಗ್ರಂಥಸಂಪಾದನಾ ಶಾಸ್ತ್ರಕ್ಕೆ ಡಿ.ಎಲ್. ಎನ್. ಅವರ ಕೊಡುಗೆ

### ೧೯-೦೨-೨೦೧೮ ಸೋಮವಾರ ಸಂಜೆ ೬-೦೦ ಗಂಟೆಗೆ



**"ಅಕ್ಕರಗೊಟ್ಟಿ"**

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : 'ಕ್ರಿಯಾಶಕ್ತಿ' ಒಂದು ವಿವೇಚನೆ

ಉಪನ್ಯಾಸ : ಶ್ರೀ ಎ.ಸಿ. ಗುರುಶಾಂತಪ್ಪ

### ೨೩-೦೨-೨೦೧೮ ಶುಕ್ರವಾರ ಸಂಜೆ ೬-೦೦ಗಂಟೆಗೆ

**ವಿ. ನಾಗರಾಜರಾವ್ ಸಮೂಹ ಮಾಧ್ಯಮ ಪ್ರಶಸ್ತಿ**

**ಮತ್ತು**

**ಪ್ರೊ. ಎಲ್.ಎಸ್. ಶೇಷಗಿರಿರಾವ್ ವಿಮರ್ಶಾ ಪ್ರಶಸ್ತಿ**

ಅಧ್ಯಕ್ಷತೆ ಮತ್ತು ಪ್ರಶಸ್ತಿ ಪ್ರದಾನ : ಡಾ.ಸಿ.ಎನ್. ರಾಮಚಂದ್ರನ್

ಪ್ರಶಸ್ತಿ ಪುರಸ್ಕೃತರು:

**ವಿ. ನಾಗರಾಜರಾವ್ ಸಮೂಹ ಮಾಧ್ಯಮ ಪ್ರಶಸ್ತಿ : ಶ್ರೀ ಜಿ.ಎನ್. ರಂಗನಾಥರಾವ್**

(ಖ್ಯಾತ ಪತ್ರಕರ್ತರು ಮತ್ತು ಸಾಹಿತಿಗಳು)

**ಪ್ರೊ. ಎಲ್.ಎಸ್. ಶೇಷಗಿರಿರಾವ್ ವಿಮರ್ಶಕ ಪ್ರಶಸ್ತಿ : ಡಾ.ಎಚ್.ಎಸ್. ರಾಘವೇಂದ್ರರಾವ್**

(ಖ್ಯಾತ ವಿಮರ್ಶಕರು)

### ೨೮-೦೨-೨೦೧೮ ಬುಧವಾರ ಸಂಜೆ : ೬-೦೦ಗಂಟೆಗೆ

**ಎಂ.ಎ. ಜಯಚಂದ್ರ ದತ್ತಿ ಉಪನ್ಯಾಸ**

ಉಪನ್ಯಾಸ : ಡಾ.ಎಲ್.ಜಿ.ಮೀರಾ

ವಿಷಯ : ಹತ್ತನೇ ಶತಮಾನದ ಜೈನಕಾವ್ಯಗಳಲ್ಲಿ ಪ್ರಭುತ್ವದ ನೆಲೆಗಳು

**ಕೋರಿಕೆ :**

**ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ.**

**ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. 20/ - ಆಗಿದ್ದು ಐದು ವರ್ಷಗಳ ಚಂದಾಹಣ ರೂ, 100/- ಮಾತ್ರ.**

**ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.**

# ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ನಡೆದ ಕಾರ್ಯಕ್ರಮಗಳು

## ೨೭-೧೧-೨೦೧೭

## ತೀ.ನಂ.ಶ್ರೀ ಸ್ಮಾರಕ ದತ್ತಿ ಉಪನ್ಯಾಸ




ಡಾ|| ಎಚ್. ಎಸ್. ರಾಘವೇಂದ್ರ ರಾವ್

ವಿಷಯ : ಕನ್ನಡ ವಿಮರ್ಶೆ-ದೇಶಿ ಸಾಧ್ಯತೆಗಳು

ದಿನಾಂಕ ೨೭-೧೧-೨೦೧೭ ರಂದು ತೀ.ನಂ.ಶ್ರೀ ಸ್ಮಾರಕ ದತ್ತಿ ಉಪನ್ಯಾಸದಡಿಯಲ್ಲಿ ಖ್ಯಾತ ಸಾಹಿತಿ ಡಾ|| ಎಚ್. ಎಸ್. ರಾಘವೇಂದ್ರರಾವ್ ಅವರು "ಕನ್ನಡ ವಿಮರ್ಶೆ-ದೇಶಿ ಸಾಧ್ಯತೆಗಳು" ಬಗ್ಗೆ ವಿದ್ವತ್ ಪೂರ್ಣ ಉಪನ್ಯಾಸವನ್ನು ನೀಡಿದರು.

ಪ್ರಾರಂಭದಲ್ಲಿ ಡಾ, ಪಿವಿನಾರಾಯಣ ಅವರು ದತ್ತಿ ಸ್ಥಾಪಕರಾದ ಡಾ.ಅಮೃತ ಅವರ ಬಗ್ಗೆ ವಿವರಗಳನ್ನು ನೀಡಿ ಡಾ|| ಎಚ್.ಎಸ್. ರಾಘವೇಂದ್ರರಾವ್ ಅವರ ಪರಿಚಯ ಮಾಡಿ ಸರ್ವರಿಗೂ ಸ್ವಾಗತ ಕೋರಿದರು.

ಡಾ. ವಿಜಯಾ ಸುಬ್ಬರಾಜ್ ಅವರು ವಂದನಾರ್ಪಣೆ ಸಲ್ಲಿಸಿದರು.

## ೨೨-೧೨-೨೦೧೭

## ಬೇಟೆರಾಯ ದೀಕ್ಷಿತ, ವಿ. ಸೀತಾರಾಮಯ್ಯ, ಶಾಂತಾಪ್ರಭುಶಂಕರ, ವೆಂಕಟರಂಗಪ್ಪ, ಟಿ.ಎನ್. ಮಹದೇವಯ್ಯ, ಜಿ.ಪಿ.ರಾಜರತ್ನಂ, ರಾಮಚಂದ್ರ ಪಟವಾರಿ, ಚಂದ್ರಶೇಖರ ಶರ್ಮ, ಎಸ್. ಶ್ರೀಕಂಠಯ್ಯ ಸಂಯುಕ್ತ ದತ್ತಿಗಳ ಅಡಿಯಲ್ಲಿ ವಿಶೇಷ ಉಪನ್ಯಾಸ

ವಿಷಯ : ಚಾಮರಸನ ಪ್ರಭುಲಿಂಗ ಲೀಲೆ

ಖಎಖಅ ಕಾಲೇಜಿನ ನಿವೃತ್ತ ಪ್ರಾಂಶುಪಾಲರಾದ ಡಾ|| ಸಿ.ಯು. ಮಂಜುನಾಥ ಅವರು ಚಾಮರಸ ವಿರಚಿತ "ಪ್ರಭುಲಿಂಗ ಲೀಲೆ" ಯ ಬಗ್ಗೆ ಮೌಲಿಕ ಉಪನ್ಯಾಸವನ್ನು ನೀಡಿದರು.ಉಪನ್ಯಾಸದ ಪ್ರಾರಂಭದಲ್ಲಿ ಪ್ರತಿಷ್ಠಾನವು ಶ್ರೇಷ್ಠ ವಿದ್ವಾಂಸರುಗಳ ದತ್ತಿಯ ಕಾರ್ಯಕ್ರಮದಲ್ಲಿ ತಮಗೆ ಉಪನ್ಯಾಸ ನೀಡಲು ಆಹ್ವಾನಿಸಿರುವುದನ್ನು ಒಂದು ಗೌರವದ ವಿಷಯವೆಂದು ಪರಿಗಣಿಸಿ, ಆ ವಿದ್ಯಾಂಸರನೆಲ್ಲರನ್ನು ವಂದಿಸಿ ತಮ್ಮ ಉಪನ್ಯಾಸವನ್ನು ಪ್ರಾರಂಭಿಸಿದರು. ತಾವು ಶ್ರೀ ಎಂ.ವಿ. ಸೀತಾರಾಮಯ್ಯನವರ ಶಿಷ್ಯರೆಂದು ನೆನಪಿಸಿಕೊಂಡರು.

ಚಾಮರಸ ಕಾಲ ಅವನ ಗುರು, ಅವನ ಸಮಕಾಲೀನ ಇತರ ಕವಿಗಳು ಮತ್ತು ಅವರ ಕೃತಿಗಳಿಂದ ಇವನ ಬಗ್ಗೆ ಲಭಿಸಿರುವ ಮಾಹಿತಿಗಳು ಮತ್ತು ಈತನೊಬ್ಬ ವಿರಕ್ತ ಮನೋಭಾವದ ವೀರಶೈವನೆನ್ನುವ ವಿಷಯಗಳನ್ನು ತಿಳಿಸಿದರು. ಹರಿಹರನ ಪ್ರಭುದೇವ ರಗಳೆಯು ಚಾಮರಸನ ಪ್ರಭು ಲಿಂಗಲೀಲೆಗಿಂತ ಭಿನ್ನ ದಾಟಿಯಲ್ಲಿರುವುದನ್ನು ಕೆಲವು ಅಂಶಗಳಿಂದ ಸ್ಪಷ್ಟಪಡಿಸಿದರು.

ಪ್ರೊ|| ಎಂ.ಆರ್.ಶ್ರೀನಿವಾಸ ಮೂರ್ತಿಯವರ ಅಭಿಪ್ರಾಯದಲ್ಲಿ, ಒಂದು ಉತ್ತಮ ಜೀವನ ಚರಿತ್ರೆಗೆ ಪ್ರಭುಲಿಂಗ ಲೀಲೆಯೇ ಉದಾರಣೆಯಾಗಬಲ್ಲದು ಎಂದು ಕೆಲವು ಅಂಶಗಳಿಂದ ನಿರೂಪಿಸಿದರು. ಶೂನ್ಯ ಸಂಪಾದನೆಯ ಪದ್ಯರೂಪವೇ ಪ್ರಭುಲಿಂಗ ಲೀಲೆ ಎಂಬ ಡಾ|| ಚಿದಾನಂದ ಮೂರ್ತಿಯವರ ಅಭಿಪ್ರಾಯವನ್ನು ಒಪ್ಪದ, ಶ್ರೀ ಮಂಜುನಾಥ ಅವರು, ಅಲ್ಲಮನ ಪಾತ್ರನಿರೂಪಣೆ, ಆ ಪಾತ್ರದ ಘನತೆ, ಅನಗತ್ಯ ವರ್ಣನೆಗಳಲ್ಲದಿರುವಿಕೆ, ಲೌಕಿಕ ಬಂಧನಕ್ಕೆ ಸಿಲುಕದ ಉದಾತ್ತ ಪಾತ್ರ, ಅಪೂರ್ವ ಅನುಪಮ ರಸಬೆಳವಣಿಗೆ, ಉಪಕತೆಗಳ ಹಾವಳಿಯಿಂದ ಮುಕ್ತವಾಗಿರುವಿಕೆ, ಇವೆಲ್ಲವೂ ಕಥಾನಾಯಕ ಅಲ್ಲಮನ ಮೇಲೆ ಕೇಂದ್ರಿಕೃತವಾಗಿರುವುದನ್ನು ಕೆಲವು ಉದಾಹರಣೆಗಳಿಂದ ವಿಷದ ಪಡಿಸಿದರು. ಈಗಾಗಲೇ ಆರು ಭಾಷೆಗಳಲ್ಲಿ ಪ್ರಭುಲಿಂಗಲೀಲೆ ಭಾಷಾಂತರಗೊಂಡಿರುವುದನ್ನು ತಿಳಿಸಿ, ಕನ್ನಡ ಸಾರಸ್ವತ ಲೋಕದಲ್ಲಿ ಚಾಮರಸನ ಪ್ರಭುಲಿಂಗ ಲೀಲೆ ಒಂದು ಉತ್ಕೃಷ್ಟ ಕಾವ್ಯಗಳಲ್ಲೊಂದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ಉಪನ್ಯಾಸದ ಆರಂಭಕ್ಕೆ ಮೊದಲು, ಉಪನ್ಯಾಸಕರನ್ನು ಡಾ. ಪಿ.ವಿ. ನಾರಾಯಣ ಅವರು ಸಭೆಗೆ ಪರಿಚಯಿಸಿ ಎಲ್ಲಾ ದತ್ತಿದಾನಿಗಳ ಕುಟುಂಬವರ್ಗದವರನ್ನೂ ಮತ್ತು ಆಗಮಿಸಿದ್ದ ಸಭಿಕರನ್ನೂ ಸ್ವಾಗತಿಸಿದರು.

ಡಾ. ವಿಜಯಾ ಸುಬ್ಬರಾಜ್ ಅವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

## ಸಾರಂಗಿ ವೆಂಕಟರಾಮಯ್ಯ -ಪುಟ್ಟಚ್ಚಮ್ಮ ಸ್ಮಾರಕ ದತ್ತಿ ಸ್ಪರ್ಧೆ: ಪುಸ್ತಕ ಬಹುಮಾನ




ಪ್ರತಿಷ್ಠಾನದ ಮಾಜಿ ಕಾರ್ಯದರ್ಶಿಶ್ರೀ ಎಸ್.ವಿ. ಶ್ರೀನಿವಾಸರಾವ್ ಅವರು ಸ್ಥಾಪಿಸಿರುವ ಸಾರಂಗಿ ವೆಂಕಟರಾಮಯ್ಯ -ಪುಟ್ಟಚ್ಚಮ್ಮ ಸ್ಮಾರಕ ದತ್ತಿ ಸ್ಪರ್ಧೆ ದತ್ತಿ ನಿಧಿ ಅಡಿಯಲ್ಲಿ ೨೦೧೬ನೇ ಸಾಲಿನಲ್ಲಿ ಪ್ರಥಮ ಮುದ್ರಣವಾಗಿ ಪ್ರಕಟಗೊಂಡಿರುವ ನಾಟಕವೊಂದನ್ನು ಸ್ಪರ್ಧೆಗೆ ಆಹ್ವಾನಿಸಲಾಗಿತ್ತು. ಈ ಸ್ಪರ್ಧೆಯಲ್ಲಿ ಆಯ್ಕೆ ಸಮಿತಿಯ ತೀರ್ಮಾನದಂತೆ, ಈ ಪ್ರಶಸ್ತಿಗೆ ಯುವ ಬರಹಗಾರರಾದ ಶ್ರೀ ಬೇಲೂರು ರಘುನಂದನ್ ಅವರ "ರಕ್ತವರ್ಣೆ" ಎಂಬ ನಾಟಕ ಕೃತಿಯು ಆಯ್ಕೆಯಾಗಿದ್ದು, ಪ್ರಶಸ್ತಿ ಮೊತ್ತ ೩೦೦೦/- ರೂಪಾಯಿಗಳು ಮತ್ತು ಪ್ರಶಸ್ತಿ ಪತ್ರವನ್ನು ಶ್ರೀಯುತರಿಗೆ ದಿನಾಂಕ ೨೩-೧೨-೨೦೧೭ ರಂದು ಸಂಜೆ ಡಾ|| ಸಿ.ಯು.ಮಂಜುನಾಥ, ನಿವೃತ ಪ್ರಾಚಾರ್ಯರು, SJRC ಕಾಲೇಜು, ಅವರು ಪ್ರದಾನ ಮಾಡಿದರು.

## ೧೦-೦೧-೨೦೧೮

## ಗಮಕವಾಹಿನಿ-ಮಾಲೆ -೨೪

ಪಂಪಭಾರತ ಸಂಚಿಕೆ -೧೧ (ಮುಂದುವರೆದ ಭಾಗ)

ವಾಚನ: ಶ್ರೀಮತಿ ಗಂಗಮ್ಮ ಕೇಶವಮೂರ್ತಿ

ವ್ಯಾಖ್ಯಾನ : ಶ್ರೀಮತಿ ಗಾಯತ್ರಿ

ನೇತೃತ್ವ : ಶ್ರೀಮತಿ ಸಿ.ವಿ. ಶ್ರೀಮತಿ ಗಮಕ ಕಲಾ ಪ್ರತಿಷ್ಠಾನ

ಕಾರಣಾಂತರಗಳಿಂದ ಪ್ರಕಟಿಸಿದ ವಿದ್ವಾಂಸರ ಅನುಪಸ್ಥಿತಿಯಲ್ಲಿ,




ಬಯಸದೇ ಬಂದ ಭಾಗ್ಯ ವೆಂಬಂತೆ, ಕರ್ನಾಟಕ ಗಮಕ ಗಮಕ ಕಲಾ ಪ್ರತಿಷ್ಠಾನದ ಅಧ್ಯಕ್ಷರೇ ಆದ ಶ್ರೀಮತಿ ಗಂಗಮ್ಮ ಕೇಶವಮೂರ್ತಿಯವರು ಕಾರ್ಯಕ್ರಮಕ್ಕೆ ಆಗಮಿಸಿ, ವಾಚನ ವನ್ನು ನಡೆಸಿಕೊಟ್ಟು ಕಾರ್ಯ ಕ್ರಮದ ಘನತೆಯನ್ನು ಹೆಚ್ಚಿಸಿದರು. ಭಾರತ ಯುದ್ಧ ಪ್ರಾರಂಭದ ಸನ್ನಿವೇಶ:– ಕರ್ಣನ ಪ್ರತಾಪ, ಅಭಿಮನ್ಯುವಿನ ಶೌರ್ಯ, ಮತ್ತು ಸಾವಿನ ಚಿತ್ರಣ, ಅರ್ಜುನ ಪಾಶುಪತಾಸ್ತ್ರ ಪಡೆಯುವ ಸಂದರ್ಭ ಮತ್ತು ದ್ರೋಣಾಚಾರ್ಯರ ಸಾವಿನೊಂದಿಗೆ ಈ ಸಂಚಿಕೆ ಸಮಾಪ್ತವಾಯಿತು. ಜ್ಞಾನೋದಯ ವಿದ್ಯಾಸಂಸ್ಥೆಯಲ್ಲಿ ಕನ್ನಡ ಪ್ರಾಧ್ಯಾಪಕಿಯಾಗಿರುವ ಶ್ರೀಮತಿ ಗಾಯತ್ರಿಯವರು ತಮ್ಮ ವ್ಯಾಖ್ಯಾನದ ಮೂಲಕ ಪ್ರಸಂಗಗಳ ಚಿತ್ರಣವನ್ನು ನೀಡಿ, ಸಭಿಕರ ಮೆಚ್ಚುಗೆಗೆ ಪಾತ್ರರಾದರು.

ಕಾರ್ಯಕ್ರಮದ ಪ್ರಾರಂಭದಲ್ಲಿ ಡಾ॥ಪಿ.ವಿ. ನಾರಾಯಣ ಅವರು ಕಲಾವಿದರನ್ನು ಕಾರ್ಯಕ್ರಮಕ್ಕೆ ಆಹ್ವಾನಿಸಿ, ಸಭೆಗೆ ಪರಿಚಯಮಾಡಿಕೊಟ್ಟರು. ಡಾ॥ ವಿಜಯಾ ಸುಬ್ಬರಾಜ್ ವಂದನಾರ್ಪಣೆ ಸಲ್ಲಿಸಿದರು.

## ೧೨–೦೧–೨೦೧೮
## ಶ್ರೀಮತಿ ರಂಗನಾಯಕಮ್ಮ – ಶ್ರೀ ಕೆ.ಜಿ. ಸುಬ್ಬರಾವ್ ದತ್ತಿ ಸಂಗೀತ ಕಾರ್ಯಕ್ರಮ

ಹಾಡುಗಾರಿಕೆ : ಶ್ರೀಮತಿ ಪ್ರಭಾ ಜೆ. ಇನಾಂದಾರ್ ಹಾಗೂ ತಂಡದವರು

ಬಿಎಂಶ್ರೀ ಪ್ರತಿಷ್ಠಾನದಲ್ಲಿ ಬಿ.ಎಂ.ಶ್ರೀ ಅವರ ರಚನೆಯ 'ಕರುಣಾಳು ಬಾ ಬೆಳಕೆ ಮುಸುಕಿದೀ ಮಬ್ಬಿನಲ್ಲಿ' –––ಎಂಬ ಗೀತೆಯೊಂದಿಗೆ ಸುಗಮ ಸಂಗೀತದ ಕಾರ್ಯಕ್ರಮಕ್ಕೆ ಚಾಲನೆ ನೀಡಿದವರು. ಶ್ರೀಮತಿ ಪ್ರಭಾ ಜೆ.ಇನಾಂದಾರ್ ಮತ್ತು ಅವರ ಐದು ಸದಸ್ಯರ ತಂಡ.ಸಂಗೀತಾಸಕ್ತರಿಂದ ತುಂಬಿದ ಸಭೆಗೆ, ನಂತರ ಜಿ.ಎಸ್.ಎಸ್. ದ.ರಾ. ಬೇಂದ್ರೆ, ಶ್ರೀಗೋಪಾಲಕೃಷ್ಣ ಅಡಿಗ ಮತ್ತು ಇತರರು ರಚಿಸಿದ ಜನಪ್ರಿಯ ಭಾವಗೀತೆಗಳನ್ನು ಸುಶ್ರಾವ್ಯವಾಗಿ ಹಾಡಿ ಎಲ್ಲರ ಮೆಚ್ಚುಗೆಗೆ ಪಾತ್ರರಾದರು. ಹಿರಿಯ ಸಂಗೀತ ಸಂಯೋಜಕರಾದ ಶ್ರೀ ಸೋಮಸುಂದರ್ ಅವರ ಉಪಸ್ಥಿತಿಯು, ಹಾಡುಗಾರರ ತಂಡಕ್ಕೆ ಸ್ಫೂರ್ತಿ ಮತ್ತು ಉತ್ತೇಜನ ನೀಡಿತು.ಈ ತಂಡದಲ್ಲಿ ಭಾಗವಹಿಸಿದ ಇತರ ಸಂಗೀತಗಾರರು ಶ್ರೀಮತಿ ಶೋಭಾ, ಶ್ರೀಮತಿ ಗೀತ, ಶ್ರೀಮತಿ ಪಾರಿಜಾತ, ಶ್ರೀಮತಿ ನಂದ ಮತ್ತು ಶ್ರೀಮತಿ ಭಾಗ್ಯ.



ಕಾರ್ಯಕ್ರಮದ ಪ್ರಾರಂಭದಲ್ಲಿ ಡಾ.ವಿಜಯಾ ಸುಬ್ಬರಾಜ್ ಕಲಾವಿದರನ್ನು ಸಭೆಗೆ ಸ್ವಾಗತಿಸಿ ಮತ್ತು ಪರಿಚಯಿಸಿ, ದತ್ತಿದಾನಿಗಳ ಕುಟುಂಬದವರನ್ನೂ ಮತ್ತು ಸಂಗೀತಾಸ್ತರನ್ನೂ ಸ್ವಾಗತಿಸಿದರು. ಶ್ರೀ ಗುರುಪ್ರಸಾದ್ ಬಿ.ಎಸ್. ಸರ್ವರಿಗೂ ವಂದನೆಸಲ್ಲಿಸಿದರು. **೭ನೇ ಪುಟಕ್ಕೆ**

**ಪರಿಚಯ**

**ಡಾ. ಸಿ.ಯು. ಮಂಜುನಾಥ್**

೧೯೫೦ರಲ್ಲಿ ಜನಿಸಿದ ಡಾ॥ ಸಿ.ಯು. ಮಂಜುನಾಥ್ ಅವರು ಕನ್ನಡ ಬಿ.ಎ. ಆನರ್ಸ್ ಮತ್ತು ಎಂ.ಎ. ಪದವಿಯಲ್ಲಿ ಪ್ರಥಮ ದರ್ಜೆ ಹಾಗೂ ರ್‍ಯಾಂಕ್ ಪಡೆದವರು.ಅವರಿಗೆ ರಾಷ್ಟ್ರೀಯ ಅರ್ಹತಾ ವೇತನವೂ ದೊರಕುತ್ತಿತ್ತು. ಅವರಿಗೆ "ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ–ಕ್ರಿ.ಶ. ೧೧೫೦– ೧೩೪೦" ಎಂಬ ಮಹಾಪ್ರಬಂಧಕ್ಕೆ ಪಿಎಚ್.ಡಿ. ಪದವಿಯನ್ನು ಪಡೆದುಕೊಂಡಿದ್ದಾರೆ. ಶ್ರೀಯುತರು ಶ್ರೀ ಜಗದ್ಗುರು ರೇಣುಕಾಚಾರ್ಯ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದು ೨೦೦೭ರಲ್ಲಿ ನಿವೃತ್ತಿ ಹೊಂದಿದ್ದಾರೆ. ಬೆಂಗಳೂರು ವಿ.ವಿ.ಯ ಅಂಗೀಕೃತ ಮಾರ್ಗದರ್ಶಕರಾಗಿ, ಮೂರು ವಿದ್ಯಾರ್ಥಿಗಳು ಇವರ ಮಾರ್ಗ ದರ್ಶನದಲ್ಲಿ ಪಿಎಚ್.ಡಿ.ಪದವಿ ಪಡೆದಿದ್ದಾರೆ.

ಹಲವು ಪ್ರಶಸ್ತಿಗಳನ್ನು ಪಡೆದುಕೊಂಡಿರುವ ಇವರು ಸಾಹಿತ್ಯಿಕ–ಸಾಂಸ್ಕೃತಿಕ ಕ್ಷೇತ್ರದಲ್ಲಿ ಅತ್ಯುತ್ತಮ ಹೆಸರು ಸಂಪಾದಿಸಿ ಕೊಂಡಿದ್ದಾರೆ. ಹಲವಾರು ಪ್ರತಿಷ್ಠಿತ ರಾಜ್ಯ ಹಾಗೂ ರಾಷ್ಟ್ರಮಟ್ಟದ ಸಂಸ್ಥೆಗಳಲ್ಲಿ ಸಂಪನ್ಮೂಲ ವ್ಯಕ್ತಿಯೆಂದು ಗುರುತಿಸಿಕೊಂಡಿದ್ದಾರೆ. ಸಂಶೋಧನೆ ಉದ್ದೇಶದಿಂದ ರಾಷ್ಟ್ರದಲ್ಲೂ ಮತ್ತು ಅಮೇರಿಕಾದಲ್ಲೂ ಪ್ರವಾಸ ಕೈಗೊಂಡಿದ್ದಾರೆ. ಹದಿನೆಂಟಕ್ಕೂ ಮಿಕ್ಕಿದ ಇವರ ಸಂಶೋಧನಾ ಲೇಖನಗಳು ಮತ್ತು ಕೃತಿಗಳು ಪ್ರಕಟವಾಗಿವೆ.

**ಪರಿಚಯ**

**'ಗಮಕವಿದುಷಿ, ಗಂಗಮ್ಮ ಕೇಶವಮೂರ್ತಿ'**

* ೧೨–೪–೧೯೪೦ ರಂದು ಜನನ. ಸಂಗೀತಗಾರರ ಮನೆತನ. ಸಂಗೀತವನ್ನು ಸೀನಿಯರ್ ಗ್ರೇಡ್ ಪರೀಕ್ಷೆಯಲ್ಲಿ ತೇರ್ಗಡೆ ಹಾಗೂ ಸಂಪ್ರದಾಯದ ಹಾಡುಗಳನ್ನು ಕಲಿಕೆ.
* ಹಿರಿಯ ಗಮಕಿಗಳಾದ ಅಶ್ವತ್ಥನಾರಾಯಣ ಬಿ. ಎಸ್. ಎಸ್. ಕೌಶಿಕ್, ಎಂ. ರಾಘವೇಂದ್ರರಾವ್ ಮತ್ತು ಸತ್ಯವತಿ ಕೇಶವಮೂರ್ತಿ ಅವರಿಂದ ಗಮಕದ ಕಲಿಕೆ ವಾಚನ / ವ್ಯಾಖ್ಯಾನಗಳೆರಡರಲ್ಲೂ ಸಾಕಷ್ಟು ಪಾಂಡಿತ್ಯ
* ತಮ್ಮ ಹತ್ತನೆಯ ವಯಸ್ಸಿನಿಂದಲೇ ಕಾರ್ಯಕ್ರಮಗಳು
* ದೇಶಾದ್ಯಂತ ಸಾವಿರಾರು ಕಾರ್ಯಕ್ರಮಗಳನ್ನು ನೀಡಿದ್ದಾರೆ.
* ಗಮಕ ತರಗತಿಗಳನ್ನು ಪ್ರಾರಂಭಿಸಿ ಅನೇಕ ವಿದ್ಯಾರ್ಥಿಗಳನ್ನು ತಯಾರು ಮಾಡಿ ಗಮಕ ಕ್ಷೇತ್ರಕ್ಕೆ ನೀಡಿದ್ದಾರೆ.
* ಪರಿಷತ್ತು ನಡೆಸುವ ಪರೀಕ್ಷೆಗಳ ಪರೀಕ್ಷಕರಾಗಿ ಕಾರ್ಯನಿರ್ವಹಿಸಿದ್ದಾರೆ.
* ಗಮಕ ಕಲಾ ಪರಿಷತ್ತಿನ ಪಠ್ಯಪುಸ್ತಕ ಪರಿಸ್ಕರಣಾ ಸಮಿತಿಯ ಸಂಚಾಲಕರಾಗಿದ್ದರೆ.

ಪ್ರಶಸ್ತಿ, ಪುರಸ್ಕಾರಗಳು

* ಶಿವಮೊಗ್ಗ ಹೊಸಹಳ್ಳಿಯ ಗಮಕ ಕಲಾ ಪರಿಷತ್ತಿನಿಂದ 'ಕಾವ್ಯಗಾಯನ ಕಲಾಧರೆ'ಪ್ರಶಸ್ತಿ,
* ಕಾಳಿಂಗರಾವ್ ಬಳಗದಿಂದ 'ಕಾವ್ಯಗಾನ ಕೋಗಿಲೆ'ಪ್ರಶಸ್ತಿ,
* ವೆಂಕಟೇಶ ನಾಟ್ಯ ಮಂದಿರ ಮತ್ತು ಮಹಿಳಾ ಅಭ್ಯುದಯ ಸಂಘದಿಂದ 'ಶ್ರೇಷ್ಠಗಮಕಿ' ಸನ್ಮಾನ.
* ಹರಿಹರದಲ್ಲಿ ನಡೆದ, ಗಮಕ ಕಲೋತ್ಸವದಲ್ಲಿ ಕನಕಗಿರಿ ಲಲಿತಕಲಾ ಸಂಘದವತಿಯಿಂದ ಸನ್ಮಾನಿಸಲ್ಪಟ್ಟಿದ್ದಾರೆ.
* ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಇವರಿಗೆ ೧೯೯೭–೯೮ರ ಸಾಲಿನ 'ಕರ್ನಾಟಕ ಕಲಾಶ್ರೀ' ಪ್ರಶಸ್ತಿ.
* ಕರ್ನಾಟಕ ಗಮಕ ಕಲಾಪರಿಷತ್ತಿನ ಅಧ್ಯಕ್ಷೆ ಪದವಿ.
* ಗಮಕ ಕಲಾ ಸಮ್ಮೇಳನದ ಕಾರ್ಯಕ್ರಮದ ಅಧ್ಯಕ್ಷೆ

# ಶ್ರೀಸಾಹಿತ್ಯ ಪ್ರಶಸ್ತಿ ಪುರಸ್ಕೃತರಾದ
# ಪ್ರೊ.ಎಲ್.ಎಸ್. ಶೇಷಗಿರಿರಾವ್ ಅವರ ಮನದಾಳದ ಮಾತುಗಳು



**ಶ್ರೀಯುತರ ಧರ್ಮಪತ್ನಿಯಾದ ಶ್ರೀಮತಿ ಭಾರತಿ ಅವರು ಓದಿದವರು.**

ಇವತ್ತು ನನ್ನ ಹೃದಯ ಕೃತಜ್ಞತೆಯಿಂದ ತುಂಬಿ ಬರುತ್ತಿದೆ. ನಾನು ಕನ್ನಡಕ್ಕೆ ಮಾಡಿರುವ ಮಿತವಾದ ಸಾಧನೆಯನ್ನು ತಾವು ಔದಾರ್ಯದಿಂದ ಪರಿಗಣಿಸಿ ಈ ಪ್ರಶಸ್ತಿಯನ್ನು ನನಗೆ ನೀಡಿದ್ದೀರಿ. ಇಂತಹ ಸಂದರ್ಭದಲ್ಲಿ ನನಗೆ ಹಿರಿಯರಾದ ಅನಕೃ ಅವರ ಒಂದು ಮಾತು ನೆನಪಿಗೆ ಬರುತ್ತದೆ. 'ಕನ್ನಡಕ್ಕೆ ಸೇವೆ ಮಾಡಲು ನನ್ನಂತಹವರು, ನನಗಿಂತ ಸಮರ್ಥರು ಸಾವಿರಾರು ಜನರಿದ್ದಾರೆ. ಆದರೆ ನನಗಿರುವುದು ಕನ್ನಡವೊಂದೇ, ಅದನ್ನು ಬಿಟ್ಟು ಬೇರೆ ಯಾವ ಭಾಷೆಯನ್ನು ನಾನು ಸೇವಿಸಲಿ?' ನಾನು ಕನ್ನಡ ಸೇವೆ ಮಾಡುತ್ತಿರುವ ಸಾವಿರಾರು ಜನರಲ್ಲಿ ಒಬ್ಬ. ಹಲವು ಕಾರಣಗಳಿಂದ ಈ ಪ್ರಶಸ್ತಿಯು ನನಗೆ ಬಹಳ ಪ್ರಿಯವಾದ ಗೌರವ. ಇದು ಆಚಾರ್ಯ ಬಿ.ಎಂ.ಶ್ರೀ. ಅವರ ಹೆಸರನ್ನು ಪಡೆದಿರುವ ಪ್ರಶಸ್ತಿ. ಆಚಾರ್ಯ ಶ್ರೀ ಅವರು ನನ್ನ ಗುರುಗಳು. ನಾನು ಸೆಂಟ್ರಲ್ ಕಾಲೇಜಿನಲ್ಲಿ 1944ರಲ್ಲಿ ಇಂಗ್ಲಿಷ್ ಆನರ್ಸ್ ತರಗತಿಗೆ ಸೇರಲು ಬಯಸಿದಾಗ ಆಚಾರ್ಯ ಶ್ರೀ ಅವರು ಅಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದರು. ಆ ಕಾಲದಲ್ಲಿ ಆನರ್ಸ್ ಮತ್ತು ಮಾಸ್ಟರ್ ಡಿಗ್ರಿ ತರಗತಿಗಳಿಗೆ ಸೇರ ಬಯಸುವವರು ಪ್ರೊಫೆಸರ್ ಅನ್ನು ಸಂದರ್ಶಿಸಬೇಕಾಗಿತ್ತು. ಶ್ರೀಯವರು ಸಂದರ್ಶನದಲ್ಲಿ ನನಗೆ ಕೆಲವೇ ಕೆಲವು ಪ್ರಶ್ನೆಗಳನ್ನು ಕೇಳಿದರು. You have secured the first place in English , So there is no difficulty in your admission. But what do you propose to do after English honours ಎಂದು ಪ್ರಶ್ನಿಸಿದರೂ 'I suppose I will take up some Job' ಎಂದು ನಾನು ಉತ್ತರ ಹೇಳಿದೆ. ಶ್ರೀಯವರು ಹೇಳಿದರು, 'ನಿಮಗೆ ಕನ್ನಡದಲ್ಲಿಯೂ ಹೆಚ್ಚು ಅಂಕಗಳು ಬಂದಿವೆ. So you are good at both English and Kannada. ಕನ್ನಡವನ್ನು ನಿಮ್ಮಂತಹ ತರುಣರ ಕೈಯಲ್ಲಿ ಇಡುತ್ತಿದ್ದೇವೆ. ನಮ್ಮ ಕಾಲ ಆಗೆ ಹೋಯಿತು. ಆದರೆ ಕನ್ನಡಕ್ಕಾಗಿ ಆಗಬೇಕಾದ ಕೆಲಸಗಳು ನೂರಿವೆ. ಅದನ್ನು ನಿಮ್ಮಂತಹ ತರುಣರು, ಮಾಡಬೇಕು. 'It is your mother tongue and so your mother' ಅವರ ಧ್ವನಿಯಲ್ಲಿ ಎಷ್ಟು ಕಳಕಳಿ ಇತ್ತು ಎನ್ನುವುದು ಸ್ಪಷ್ಟವಾಗಿತ್ತು. ಅವರ ಮಾತುಗಳು ನನ್ನ ಹೃದಯವನ್ನು ಹೊಕ್ಕವು. ಆನರ್ಸ್ ಪರೀಕ್ಷೆಯ ಫಲಿತಾಂಶಗಳು ಬಂದಾಗ ನನಗೆ Fist class, Fist rank ಬಂದಿತ್ತು. ಬಿ.ಎಂ.ಶ್ರೀಯವರು ಆಗ ಧಾರವಾಡದ ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು. ಅವರಿಗೆ ನನ್ನ ವಿಳಾಸ ತಿಳಿದಿರಲಿಲ್ಲ. ಬೆಂಗಳೂರಿನಲ್ಲಿದ್ದ ಪ್ರೊ. ಎಸ್.ವಿ. ರಂಗಣ್ಣನವರಿಗೆ Ask Sheshagirirao if he is willing to come to Dharwad ಎಂದು ಕಾಗದ ಬರೆದರು. ನನಗೆ ಅವರ ಕಾಲೇಜಿನಲ್ಲಿ ಉಪನ್ಯಾಸಕನ ಸ್ಥಾನವನ್ನು ಕಾಯ್ದಿರಿಸುವುದಾಗಿ ತಿಳಿಸಿದ್ದರು. ಆದರೆ ಒಬ್ಬನೇ ಮಗನನ್ನು ದೂರದ ಧಾರವಾಡಕ್ಕೆ ಕಳುಹಿಸಲು ನನ್ನ ತಂದೆ ತಾಯಿಗಳು ಒಪ್ಪಲಿಲ್ಲ. ಬಿ.ಎಂ.ಶ್ರೀಯವರು ತೀರಿಕೊಳ್ಳುವವರೆಗೆ ನನ್ನನ್ನು ಬಹು ಪ್ರೀತಿಯಿಂದ ನಡೆಸಿಕೊಂಡರು. ಅವರ ಪಾಠಗಳನ್ನು ಕೇಳುವ ಭಾಗ್ಯ ನನಗೆ ಲಭ್ಯವಾಯಿತು. ಅವರು ನಮಗೆ ಗ್ರೀಕ್ ನಾಟಕ ಮತ್ತು ಕಾಳಿದಾಸನ 'ಅಭಿಜ್ಞಾನ ಶಾಕುಂತಲ'ಗಳನ್ನು ಬೋಧಿಸಿದರು. ನನ್ನ ಸಾಹಿತ್ಯ ವಿಮರ್ಶೆಯ ಒಂದು ಮುಖ್ಯ ಲಕ್ಷಣ ಅದರ ತೌಲನಿಕ ಅಂಶ.ಯಾವ ವಿಷಯವನ್ನು ತೆಗೆದುಕೊಂಡರೂ ಅದನ್ನು ತೌಲನಿಕವಾಗಿ ನೋಡುವುದು ನನಗೆ ರಕ್ತಗತವಾಗಿದೆ. ತೌಲನಿಕ ವಿಮರ್ಶೆಯ ಸವಿ ಮತ್ತು ಪ್ರಯೋಜನ ಇವುಗಳು ಬಿ.ಎಂ.ಶ್ರೀ. ಅವರು ಪಾಠ ಮಾಡುವಾಗ ನಮಗೆ ಸ್ಪಷ್ಟವಾಗುತ್ತಿದ್ದವು. ಅವರು ಮೊದಲು ಟ್ರ್ಯಾಜಿಡಿ ಎಂದರೇನು ಎಂಬ ಪ್ರಶ್ನೆಯನ್ನು ಎತ್ತಿಕೊಂಡರು. Is every work of literature that is sad tragic.ಈ ಪ್ರಶ್ನೆಯನ್ನು ಚರ್ಚಿಸಿದ ನಂತರ ಪಾಶ್ಚಾತ್ಯ ಜಗತ್ತಿನ ಮೊಟ್ಟಮೊದಲನೆಯ tragic dramatist Aeschylus ನ Agamemnon ಎಂಬ ನಾಟಕವನ್ನು ದೀರ್ಘವಾಗಿ ವಿಮರ್ಶೆ ಮಾಡಿದರು. Sophocles, Euripides ಇವರ ಒಂದೊಂದು ಕೃತಿಗಳನ್ನು ವಿಮರ್ಶಿಸಿ tragic ಎಂದರೆ ಏನು ಎನ್ನುವ ಪ್ರಶ್ನೆಗೆ ಉತ್ತರವನ್ನು ಸೂಚಿಸಿದರು. ಅವರು ಹೇಳಿದ ಒಂದು ಮಾತು ನನ್ನ ಮನಸ್ಸಿನಲ್ಲಿ ನಿಂತು ಬಿಟ್ಟಿದೆ; Evil destroying goodness is tragic, but even more tragic is goodness destroying goodness- ಇದನ್ನು ದುಷ್ಯಂತನಿಂದ ಶಾಕುಂತಲೆಗೆ ಒದಗುವ ಆಘಾತವನ್ನು ಉದಾರಹಣೆಯಾಗಿ ಹೇಳಿದರು. In this sense is Kalidasa's Shakuntala tragic? ಈ ಪ್ರಶ್ನೆಯನ್ನು ಚರ್ಚಿಸಿದರು. Shakespeare ಪ್ರಸಿದ್ಧವಾದ Hamlet ನಾಟಕವನ್ನು ವಿಮರ್ಶಿಸಿ ನಮಗೆ ಹಲವು ಪ್ರಶ್ನೆಗಳನ್ನು ಕೇಳಿ ಉತ್ತರಗಳನ್ನು ಪಡೆದರು. ಹೀಗೆ ಈಸ್ಕಿಲಸ್, ಸೊಫೋಕ್ಲಿಸ್, ಯೂರಿಪಿಡೀಸ್, ಷೇಕ್ಸ್‌ಪಿಯರ್ ಮತ್ತು ಕಾಳಿದಾಸ ಇವರ ಸಾಧನೆಯನ್ನು ಸ್ವಲ್ಪ ಮಟ್ಟಿಗೆ ಪರಿಚಯ ಮಾಡಿಕೊಟ್ಟರು. ಮುಂದೆ ಇವರ ಕೆಲವು ನಾಟಕಗಳ ಪರಿಚಯ ಮಾಡಿಕೊಟ್ಟರು. ಹೀಗೆ ನಮಗೆ ತೌಲನಿಕ ಅಧ್ಯಯನದ ಅಭ್ಯಾಸವು ಪರಿಚಯವಾಯಿತು. ನಮ್ಮ ಅಭ್ಯಾಸವು ಮುಂದುವರೆದಂತೆ ತೌಲನಿಕ ವಿಮರ್ಶೆಯನ್ನು ರಕ್ತಗತಗೊಳಿಸಿಕೊಂಡೆವು.

ಸುಸಂಸ್ಕೃತವಾದ ಯಾವ ಮನುಷ್ಯನೂ ತನ್ನ ತಾಯಿಯ ಒಳ್ಳೆಯ ಗುಣಗಳನ್ನು ಲೆಕ್ಕ ಹಾಕಿ ಅವಳನ್ನು ಗೌರವಿಸುವುದಿಲ್ಲ. ಅವಳು ತನ್ನ ತಾಯಿ ಅಷ್ಟು ಸಾಕು. ಅವನಿಗೆ ಆಕೆ ಒಬ್ಬ ದೇವತೆಯಾಗಿ ಕಾಣುತ್ತಾಳೆ. ಮಾತೃಭಾಷೆಯ ವಿಷಯವೂ ಹೀಗೇಯೇ ತನ್ನ ಭಾಷೆಯ ಸಾಮರ್ಥ್ಯ, ಸೌಂದರ್ಯಗಳನ್ನು ಗಮನಿಸಿ ಯಾವ ಸುಸಂಸ್ಕೃತನೂ ತಾಯಿ ಭಾಷೆಯನ್ನು ಗೌರವಿಸುವುದಿಲ್ಲ. ಅದು ತನ್ನ ತಾಯಿ ಭಾಷೆ, ಆದ್ದರಿಂದ ಅದರ ವಿಷಯದಲ್ಲಿ ಅವನಿಗೆ ಪ್ರೀತಿ, ಹೆಮ್ಮೆ. ಈ ಗೌರವವನ್ನು ನನಗೆ ನೀಡಿರುವ ಕಾರಣ ಕನ್ನಡ ಭಾಷೆಗೆ ನಾನು ಮಾಡಿರುವ ಅತ್ಯಂತ ಮಿತವಾದ ಸೇವೆ.

ನನಗೆ ದಿನಗಳು ಕಳೆದಂತೆ ಒಂದು ಪಾಠ ಮನಸ್ಸಿನಲ್ಲಿ ಬಹಳವಾಗಿ ಬೇರೂರುತ್ತಿದೆ ಅವನ ಜನ ಅವನನ್ನು ಪ್ರೀತಿಯಿಂದ ಕಂಡಷ್ಟೂ ವಿಮರ್ಶಕನು ತನ್ನ ಕಾರ್ಯಕ್ಕೆ ಸಿದ್ಧತೆಯನ್ನು ಹೆಚ್ಚಿಸಿಕೊಳ್ಳಬೇಕು. ವಿಮರ್ಶಕನಿಗೆ ಅಧ್ಯಯನದ ಶಕ್ತಿಬೇಕು, ಎಷ್ಟೇ ದಿನ ಕಳೆದರೂ ಅಧ್ಯಯನ ಮಾಡುತ್ತಾ ಬಂದಿದ್ದೇನೆ. ಜಪಾನಿನ ನೊ ಎಂಬ ನಾಟಕ ಬಗೆಯು ವಿಶಿಷ್ಟವಾಗಿದೆ ಎಂದು ಕೇಳಿದ್ದೆ. ಕೆಲವು ದಿನಗಳ ಕೆಳಗೆ ಅಂತಹ ಒಂದು ನಾಟಕ ನನಗೆ ಲಭ್ಯವಾಯಿತು, ಎಷ್ಟೋ ಅಂಶಗಳನ್ನು ಕಲಿತುಕೊಂಡೆ. ಸಾಮಾನ್ಯವಾಗಿ ರಂಗಭೂಮಿಗೂ ನಾಟಕದ ಬರಹ ರೂಪಕೂ ಇರುವ ಸಂಬಂಧವನ್ನು ಅಧ್ಯಯನ ಮಾಡುವುದು ಬಹು ಆಸಕ್ತಿಯನ್ನುಂಟು ಮಾಡುತ್ತದೆ. ಪ್ರೇಕ್ಷಕರು ರಂಗಭೂಮಿಯಿಂದ ಇಪ್ಪತ್ತು-ಇಪ್ಪತ್ತೈದು ಅಡಿಯಷ್ಟು ಮೇಲೆ ಕುಳಿತು ಕೆಳಗೆ 3-4 ಅಡಿ ಎತ್ತರ ಕಾಣುವ ನಟರು ಅಭಿನಯಿಸುವ ನಾಟಕದಲ್ಲಿ ಬರಹ ರೂಪಕ್ಕೂ ರಂಗಭೂಮಿಯ ರೂಪಕ್ಕೂ ಇರುವ ಸಂಬಂಧ ಬಹಳ ಜಟಿಲವಾದದ್ದು. ಇದನ್ನು ಪ್ರಾಚೀನ ಗ್ರೀಕ್ ನಾಟಕದ ಅಭಿನಯದಲ್ಲಿ ಕಾಣುತ್ತೇವೆ. ಹಾಗೆಯೇ ಬ್ರೆಕ್ಟನ 'ಎಪಿಕ್ ಥಿಯೇಟರ್'ನ ಅಧ್ಯಯನಕ್ಕೆ ತೊಡಗಿದರೆ ಹೊಸಹೊಸ ಪ್ರಶ್ನೆಗಳು ಏಳುತ್ತವೆ. ಸಾಮಾನ್ಯವಾಗಿ ನಾವು ನಟ ತನ್ನ ಪಾತ್ರದಲ್ಲಿ ಒಂದಾಗಿರಬೇಕು, ಹಾಗೆ ಅದರೊಡನೆ identify ಮಾಡಿಕೊಂಡಾಗ ಅವನು ಸೊಗಸಾಗಿ ಅಭಿನಯಿಸುತ್ತಾನೆ ಎಂದು ಭಾವಿಸುತ್ತೇವೆ. ಬ್ರೆಕ್ಟ್ ಹೇಳಿದ ; ತನ್ನ ಅಭಿನಯದಲ್ಲಿ ನಟನು ತನ್ನನ್ನೇ ಮರೆಯುವುದು ಅಪೇಕ್ಷಣೀಯವಲ್ಲ, ಅಭಿನಯಿಸುತ್ತಿರುವಾಗಲೇ ತನ್ನ ಅಭಿನಯವನ್ನು ಎಚ್ಚರದಿಂದ ಗಮನಿಸಿ ಅದರ ಮಿತಿಗಳನ್ನು ಗುರುತಿಸಬೇಕು. ನಾನು ಕೀಟ್ಸ್ ಕವಿಯ ಕವನಗಳನ್ನು ಬಹಳ ಪ್ರೀತಿಯಿಂದ ಓದಿದ್ದೆ.ಅವುಗಳನ್ನು ಹಲವು ವರ್ಷಗಳ ಕಾಲ ಎಂ.ಎ.ತರಗತಿಗಳಿಗೆ ಪಾಠ ಮಾಡಿದ್ದೆ. ಒಂದು ದಿನ ಪುಸ್ತಕ ಭಂಡಾರದಲ್ಲಿ ಕ್ಲಿಯಾಂತ್ ಬ್ರುಕ್ಸ್ ಎಂಬ ವಿಮರ್ಶಕನ ಪುಸ್ತಕ ಕಣ್ಣಿಗೆ ಬಿತ್ತು. ಮನೆಗೆ ತಂದು ಓದಿದೆ.ಆ ಓದು ನನಗೆ ಒಂದು ಪಾಠವಾಯಿತು. ಬ್ರುಕ್ಸ್‌ನ ವಿಮರ್ಶೆಯನ್ನು ಓದುತ್ತಿರುವಾಗ ಮತ್ತೆ ಮತ್ತೆ 'ಹೌದಲ್ಲವೆ! ಇದು ನನಗೇಕೆ ಹೊಳೆಯಲಿಲ್ಲ' ಎಂದು ಕೇಳಿಕೊಳ್ಳುವಂತಾಯಿತು.ಹೀಗೆ ಓದಿದಷ್ಟೂ ವಿಮರ್ಶಕನ ಜ್ಞಾನವು ವೃದ್ಧಿಯಾಗುತ್ತದೆ. ವಿಮರ್ಶಕನು ಸಾಧ್ಯವಾಗುವವರೆಗೆ ನನ್ನನ್ನು ಈ ದಿಕ್ಕಿನಲ್ಲಿ ಎಚ್ಚರಿಸುತ್ತದೆ.

ಓದುವುದು ಒಂದು co-operative effort ಕೃತಿಕಾರ ಅಥವಾ ಕವಿ ತಾನು ಹೇಳಬೇಕಾದುದಕ್ಕೆ ಒಂದು ರೂಪ ಕೊಡುತ್ತಾನೆ. ಸಾಹಿತ್ಯದಲ್ಲಿ ಕವಿಯು ತಾನು ಹೇಳಬೇಕಾದುದನ್ನು 4X3=12 ಎಂದು ಹೇಳಿದ ಹಾಗೆ ಹೇಳಿ ಮುಗಿಸಿಬಿಡಲು ಸಾಧ್ಯವಿಲ್ಲ. ಪರಿಚಿತವಾದ ಜಗತ್ತಿನಲ್ಲಿ ಯಾವುದು ತನ್ನ ಕಲ್ಪನೆಯಲ್ಲಿ ಇರುವುದನ್ನು ಸೂಚಿಸಬಲ್ಲದೊ ಅದನ್ನು ಹುಡುಕಿ ಆಯ್ದುಕೊಳ್ಳುತ್ತಾನೆ. ಇದನ್ನು objective correlative ಎನ್ನುತ್ತಾನೆ. ಓದುಗನು ಇದಕ್ಕೆ Reverse proce ಅನ್ನು ಅನುಸರಿಸುತ್ತಾನೆ. ಈ ಹುಡುಕಾಟದ ಮೂಲಕ ಅವನು ಕವಿಯ ಮೂಲಕಲ್ಪನೆಯನ್ನು ಕಂಡುಕೊಳ್ಳುತ್ತಾನೆ. ಇದು ಕವನದ interpretation. ಅದರ ಮುಂದಿನ ಹೆಜ್ಜೆ ಹೀಗೆ ಪಡೆದುಕೊಂಡ ಮೂಲ ಅನುಭವವು ನಮ್ಮ ಬದುಕಿನಲ್ಲಿ ಎಷ್ಟು ಮೌಲಿಕ, valuable ಎನ್ನುವುದನ್ನು ನಿರ್ಧರಿಸಬೇಕು. Interpretation ಮತ್ತು evaluation ಎರಡರಲ್ಲಿಯೂ ವಿಮರ್ಶೆಯ ಪಾತ್ರವಿದೆ. ವಿಮರ್ಶಕನ ಅನುಭವ ಮತ್ತು ಓದು ವಿಸ್ತಾರವಾದಷ್ಟೂ ಅವನ interpretation ಮೌಲಿಕವಾಗುತ್ತದೆ. ಬೇಂದ್ರೆಯವರಿಗೆ ಈ ಜಗತ್ತನ್ನು ಮೀರಿದ ಹೊಸ ಮತ್ತೊಂದು ಜಗತ್ತಿನ ಅನುಭವವಾಗುತ್ತದೆ. ಅದನ್ನು ಓದುಗನ ಅನುಭವಕ್ಕೆ ತಂದುಕೊಡಬೇಕಾದರೆ

ಒಂದು ಅಪೂರ್ವ ಸೂರ್ಯೋದಯದ ಅನುಭವವನ್ನು ವರ್ಣಿಸುತ್ತಾರೆ. ಮೂಲ ಅನುಭವವನ್ನು ಪಡೆದುಕೊಳ್ಳುವುದರಲ್ಲಿ ಗೆಲುವು ಎಷ್ಟು ಸಿಕ್ಕರೆ ಕವನವು ಅಷ್ಟು ನಮಗೆ ದಕ್ಕುತ್ತದೆ. ಆದ್ದರಿಂದ ನಾವು ಓದಿದ್ದನ್ನು ನಮ್ಮದನ್ನಾಗಿ ಮಾಡಿಕೊಳ್ಳುವುದರಲ್ಲಿ ವಿಮರ್ಶೆ ಅರ್ಥಾತ್ ವಿಮರ್ಶಕನ ಪಾತ್ರ ದೊಡ್ಡದು.

ನಾನು ಕಲಿತುಕೊಂಡಿರುವ ಇನ್ನೊಂದು ಪಾಠ, ಬಹುಮುಖ್ಯವಾದ ಪಾಠ-ವಿಮರ್ಶಕನು ಬಹು ಸುಲಭವಾಗಿ ಅಹಂಭಾವಕ್ಕೆ ತುತ್ತಾಗುತ್ತಾನೆ. ತಾವೆಲ್ಲ ಟಿ.ಎಸ್. ಎಲಿಯಟ್‌ನ ಹೆಸರನ್ನು ಕೇಳಿರುತ್ತೀರಿ.ಅವನಿಗೆ ಅವನ ಕಾವ್ಯಕ್ಕಾಗಿ ನೊಬೆಲ್ ಬಹುಮಾನ ಬಂದಿತು.ಅವನು ಕಾವ್ಯವನ್ನು ಬರೆಯಲು ಪ್ರಾರಂಭಿಸಿದಾಗ ವಿಮರ್ಶಕರು ಅವನನ್ನು ಹೀಗಳೆದರು. ಆಗ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಪ್ರೊಫೆಸರ್ ಆಫ್ ಪೊಯಟ್ರಿ, ಹಿರಿಯ ವಿಮರ್ಶಕ ಆರ್ಥರ್ ಕ್ವಿಲರ್ ಕೂಚ್ 'This Fellow cannot write two consecutive lines of poetry' ಎಂದ. ನಮ್ಮ ನಾಡಿನಲ್ಲಿಯೇ ಗೋಪಾಲಕೃಷ್ಣ ಅಡಿಗರು ನವ್ಯ ಕಾವ್ಯವನ್ನು ಪ್ರಾರಂಭಿಸಿದಾಗ ಅದು ಕವನವೇ ಅಲ್ಲ ಎಂದವರುಂಟು. ಮಹಿಳೆಯರು ಸಾಹಿತ್ಯವನ್ನು ರಚಿಸಲು ಪ್ರಾರಂಭಿಸಿದಾಗ ಅದನ್ನು ಅಡುಗೆ ಮನೆಯ ಸಾಹಿತ್ಯ ಎಂದು ಹಾಸ್ಯ ಮಾಡಿದವರುಂಟು. ಇಂಗ್ಲಿಷ್‌ನ ಶ್ರೇಷ್ಠ ಕವಿಗಳಲ್ಲಿ ಒಬ್ಬನಾದ ಜಾನ್ ಕೀಟ್ಸ್ ಕವನಗಳನ್ನು ಬರೆದಾಗ 'Go back to your scissors and pills, Poetry is not for you Mr. Keats' ಎಂದು ಸ್ಕಾಟ್ಲೆಂಡ್‌ನ ಖ್ಯಾತ ವಿಮರ್ಶಕನೊಬ್ಬ ಬರೆದ. ಯಾವ ಭಾಷೆಯ ಸಾಹಿತ್ಯ ಚರಿತ್ರೆಯನ್ನು ಓದಿದಾಗಲೂ ವಿಮರ್ಶಕರು ತಮ್ಮ ಅಹಂಕಾರದಿಂದ ಮುಗ್ಗರಿಸಿದ್ದು ಕಾಣುತ್ತದೆ. ನನಗೆ ಸಂದಿರುವ ಈ ಪ್ರಶಸ್ತಿಗೆ ಶ್ರೀ ಶಾ.ಬಾಲೂರಾಯರ ಹೆಸರು ಇದೆ.ನನಗೆ ಬಾಲೂರಾಯರ ಪರಿಚಯ ತುಂಬ ಮಿತವಾದದ್ದು. ನಾನು ದೆಹಲಿಯಲ್ಲಿ ಅವರ ಮನೆಗೆ ಅನಿರೀಕ್ಷಿತ ಅತಿಥಿಯಾಗಿ ಹೋಗಿ ಶ್ರೀಮತಿ ಕಮಲಿನಿಯವರು ತಯಾರಿಸಿದ ರುಚಿರುಚಿಯಾದ ಅಡುಗೆಯನ್ನು ಸವಿದದ್ದು ಈಗಲೂ ನನಗೆ ನೆನಪಿದೆ.ನಾನು ಮತ್ತು ಬಿ.ಸಿ. ರಾಮಚಂದ್ರ ಶರ್ಮ ಕಾಶಿಯ ವಿಶ್ವವಿದ್ಯಾನಿಲಯದಲ್ಲಿ ಒಂದು ಕಾರ್ಯಕ್ರಮವನ್ನು ಮುಗಿಸಿ ವಿಮಾನದಲ್ಲಿ ಬೆಳಗ್ಗೆ 11 ಗಂಟೆಗೆ ದೆಹಲಿ ತಲುಪಿದೆವು. ಎಲ್ಲಿ ಹೋಗುವುದೆಂದು ಗೊತ್ತಾಗದಿದ್ದಾಗ ಶರ್ಮ ಇಲ್ಲಿ ತುಂಬ ಒಳ್ಳೆಯ ಕೆಲಸ ಮಾಡುವ ಕನ್ನಡಿಗರೊಬ್ಬರಿದ್ದಾರೆ, ಅವರ ಮನೆಗೆ ಹೋಗೋಣ ಎಂದರು. ಶ್ರೀಮತಿ ಕಮಲಿನಿ ಶಾ. ಬಾಲೂರಾವ್ ನಮ್ಮನ್ನ ತುಂಬ ಆದರದಿಂದ ನಡೆಸಿಕೊಂಡರು. ಅವರು ಇಂದು ಇಲ್ಲಿಗೆ ಬಂದು ನಮ್ಮೊಡನಿರುವುದು ನನಗೆ ತುಂಬ ಸಂತೋಷವಾಗಿದೆ.

ನವ ದೆಹಲಿಯ ಕನ್ನಡ ಭಾರತಿ ಬಳಗವು 'ಷೇಕ್ಸ್‌ಪಿಯರಿಗೆ ನಮಸ್ಕಾರ' ಎನ್ನುವ ಅದ್ಭುತ ಗ್ರಂಥವನ್ನು ಪ್ರಕಟಿಸಿದ ಸಂದರ್ಭದಲ್ಲಿ ಬಾಲೂರಾಯರ ಕೆಲಸದ ರೀತಿಯನ್ನು ಕಂಡೆ. ಪುಸ್ತಕಕ್ಕಾಗಿ ಅವರು ಹಲವರು ವಿದ್ವಾಂಸರಿಗೆ ಪತ್ರವನ್ನು ಬರೆದು ಲೇಖನಗಳನ್ನು ತರಿಸಿಕೊಂಡರು. ಅವುಗಳನ್ನು ಕೂಲಂಕಷವಾಗಿ ಓದಿ ಅಚ್ಚುಕಟ್ಟಾಗಿ ವಿಮರ್ಶಿಸಿ ಬಾಲೂರಾಯರು ಪತ್ರಗಳನ್ನು ಬರೆದರು. ಅವರು ದೆಹಲಿಯ ಕೇಂದ್ರಸಾಹಿತ್ಯ ಅಕಾಡೆಮಿಯಲ್ಲಿ ಕೆಲಸ ಮಾಡುತ್ತಿದ್ದಾಗ ಅಕಾಡೆಮಿಯ ಪತ್ರಿಕೆಗೆ ಒಂದು ಹೊಸರೂಪವನ್ನು ತಂದು ಕೊಟ್ಟರು. ಈ ಪ್ರಶಸ್ತಿಯ ಹೆಸರಿನಲ್ಲಿ ಶಾ. ಬಾಲೂರಾಯರ ಹೆಸರೂ ಸೇರಿರುವುದು ನನಗೆ ಸಂತೋಷದ ವಿಷಯ.

ಈ ಕಾರ್ಯಕ್ರಮವನ್ನು ನಿರ್ವಹಿಸುತ್ತಿರುವುದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ. ಇದರ ಸ್ಥಾಪಕರು ನಮಗೆಲ್ಲ ಪ್ರಿಯರಾದ ಪ್ರೊ. ಎಂ.ವಿ. ಸೀತಾರಾಮಯ್ಯನವರು. ಈ ಸಂಸ್ಥೆಯ ಯೋಚನೆಯು ಅವರಿಗೆ ಬಂದಾಗ ಕೆಲವರು ಸ್ನೇಹಿತರನ್ನು ಕರೆದು ಸಮಾಲೋಚನೆ ಮಾಡಿದರು. ಅವರಲ್ಲಿ ನಾನೂ ಒಬ್ಬ. ಸಂತೋಷ ಕೊಟ್ಟ ಒಂದು ಅಂಶವೆಂದರೆ ಅಷ್ಟೇನೂ ಶ್ರೀಮಂತರಲ್ಲದ ಎಂ.ವಿ.ಸೀ ಅವರು ಇಷ್ಟು ಶ್ರಮವಹಿಸಿ ಹೆಸರನ್ನಿಟ್ಟರು. ಪ್ರಶಸ್ತಿ ಪ್ರದಾನ ಮಾಡಿ ನನಗೆ ಶುಭಾಶಯಗಳನ್ನು ಹೇಳಿದ್ದಾರೆ ಹಿರಿಯರಾದ ಶ್ರೀ ಎಚ್.ಎಸ್. ದೊರೆಸ್ವಾಮಿ ಅವರು, ನನ್ನ ಅವರ ಪರಿಚಯ ಸುಮಾರು 70 ವರ್ಷಗಳದು ನಾನು ಅವರನ್ನು ಕಂಡಾಗಿನಿಂದ ಅವರು ಸಾಮಾಜಿಕ ಜೀವನದಲ್ಲಿ ಕ್ರಿಯಾಶೀಲವಾಗಿ ತೊಡಗಿಕೊಂಡು ನಮ್ಮ ಸಮಾಜಕ್ಕೆ ಒಂದು ವರವಾಗಿದ್ದಾರೆ. ಇವರ ಶುಭಾಶಯಗಳನ್ನು ಪಡೆದ ನಾನು ಅದೃಷ್ಟವಂತ. ಇಂದಿನ ಸಭೆಯ ಅಧ್ಯಕ್ಷತೆ ವಹಿಸಿರುವವರು ನನ್ನ ಮಿತ್ರರಾದ ಪ್ರೊ.ಎಂ.ಎಚ್. ಕೃಷ್ಣಯ್ಯನವರು ನನ್ನ ಹಲವು ಯೋಜನೆಗಳ ಸಾಹಸಗಳಲ್ಲಿ ನನ್ನೊಡನೆ ಕೆಲಸಮಾಡಿ ಅವುಗಳ ಸಾರ್ಥಕ್ಯಕ್ಕೆ ಕಾರಣರಾಗಿದ್ದಾರೆ. ಯಾವ ವಿಶ್ವವಿದ್ಯಾಲಯಕ್ಕಾದರೂ ಕೀರ್ತಿ ತರುವ ವಿದ್ವಾಂಸರು ಅವರು.

ಈ ಸಮಾರಂಭದ ವ್ಯವಸ್ಥೆಗಾಗಿ ಬಹಳ ಪ್ರೀತಿಯಿಂದ ಶ್ರಮಿಸಿದವರು ಡಾ. ಪಿ.ವಿ. ನಾರಾಯಣ ಅವರು ಶ್ರೇಷ್ಠ ವಿದ್ವಾಂಸರು, ನಮ್ಮೆಲ್ಲರ ಪ್ರೀತಿ, ಗೌರವಗಳನ್ನು ಗೆದ್ದುಕೊಂಡವರು. ಅವರಿಗೆ ಬಿ.ಎಂ.ಶ್ರೀ ಪ್ರತಿಷ್ಠಾನದ ಇತರ ಪದಾಧಿಕಾರಿಗಳಿಗೆ, ಸದಸ್ಯರುಗಳಿಗೆ ನನ್ನ ವಂದನೆಗಳು.

ಸಿರಿಗನ್ನಡಂ ಗೆಲ್ಗೆ

ಎಲ್. ಎಸ್. ಶೇಷಗಿರಿರಾವ್

## ಅಕ್ಕರಗೊಟ್ಟಿ
## ೧೮-೦೧-೨೦೧೮
### ವಿಷಯ: "ದಿನಪತ್ರಿಕೆಗಳ ಪುರವಣಿಯ ಸ್ವರೂಪ" ಕುರಿತಚಿಂತನೆ –ಚರ್ಚೆ
### ಚಾಲನೆ ನೀಡಿದವರು :ಶ್ರೀಎನ್.ಎಸ್. ಶ್ರೀಧರಮೂರ್ತಿ



ಈ ವಿಷಯದ ಬಗ್ಗೆ ಚರ್ಚೆಗೆ ಚಾಲನೆ ನೀಡಿದವರು ಖ್ಯಾತ ಪತ್ರಕರ್ತರೂ, ಸಿನಿಮಾದ ವಿವಿಧ ಅಂಗಗಳ ಬಗ್ಗೆ ಆಳವಾದ ಅರಿವನ್ನು ಹೊಂದಿದವರೂ ಆದ ಶ್ರೀಎನ್. ಎಸ್. ಶ್ರೀಧರಮೂರ್ತಿ. ಕನ್ನಡ ನಾಡಿನಲ್ಲಿ ಪ್ರಾಚೀನ ಕಾಲದಿಂದಲೂ ಒಂದಲ್ಲ ಒಂದು ಬಗೆಯಲ್ಲಿ ಸಾಂಸ್ಕೃತಿಕ ಎಚ್ಚರ ಮನೆಮಾಡಿತ್ತು. ಪತ್ರಿಕೆಗಳು ಆರಂಭವಾದ ಮೇಲಂತೂ ಈ ಕುರಿತಚರ್ಚೆ ಮತ್ತಷ್ಟು ವ್ಯಾಪಕವಾಯಿತು. 'ಪ್ರಜಾಮತ', 'ಕರ್ಮವೀರ'ಗಳಂತಹ ಹಿಂದಿನ ವಾರಪತ್ರಿಕೆಗಳು ಲಕ್ಷಾಂತರ ಮಂದಿ ಓದುಗರನ್ನು ಹೊಂದಿತ್ತು. ಆನಂತರದ 'ಸುಧಾ'. 'ತರಂಗ' ಮತ್ತು 'ಮಂಗಳ' ಪತ್ರಿಕೆಗಳೂ, 'ಮಯೂರ', 'ಮಲ್ಲಿಗೆ' ಮುಂತಾದ ಮಾಸಪತ್ರಿಕೆಗಳೂ ಸಾಹಿತ್ಯ-ಸಂಸ್ಕೃತಿಗಳ ಬಗ್ಗೆ ಓದುಗರಲ್ಲಿ ನಿರಂತರಜೀವಂತಿಕೆಯನ್ನು ಸೃಷ್ಟಿಸಿದ್ದವು. ಆನಂತರ ದಿನಪತ್ರಿಕೆಗಳೂ ತಮ್ಮ ವಾರದ ಪುರವಣಿಗಳ ಮೂಲಕ ಸಾಂಸ್ಕೃತಿಕ ಚರ್ಚೆಯನ್ನು ಮುಂದುವರೆಸಿದವು. ಆದರೆ ಜಾಗತೀಕರಣದ ಬಳಿಕ ಹಣವೇ ಪ್ರಮುಖವಾಗಿ, ದೊಡ್ಡ ಬಂಡವಾಳದ ಪತ್ರಿಕೆಗಳು ಜಿಲ್ಲಾಮಟ್ಟದಲ್ಲಿಯೂತಮ್ಮ ಪ್ರಭಾವ ಬೀರಿಅಲ್ಲಿನ ಸಣ್ಣ ಪತ್ರಿಕೆಗಳನ್ನು ಕಬಳಿಸಿ ಪತ್ರಿಕೆಗಳ ಸಂಖ್ಯೆ ಕುಗ್ಗಲು ಶುರುವಾಯಿತು.

ಅಲ್ಲದೆ ತಮ್ಮ ಪತ್ರಿಕೆಗಳ ಪ್ರಸಾರ ಸಂಖ್ಯೆಯನ್ನು ಹೆಚ್ಚಿಸಿಕೊಂಡು ಆ ಮೂಲಕ ಜಾಹಿರಾತಿನಿಂದ ಹಣವನ್ನುಗಳಿಸಲು ಆತುರರಾದ ಬಂಡವಾಳಶಾಹಿ ಪತ್ರಿಕಾ ಮಾಲೀಕರು ಅವಕ್ಕೇ ಪ್ರಾಮುಖ್ಯ ನೀಡಿ, ಸಾಂಸ್ಕೃತಿಕ ಮಹತ್ವಕ್ಕಿಂತ ರೋಚಕತೆಗೆಒತ್ತು ನೀಡಿ, ಪ್ರಸಾರ-ಜಾಹಿರಾತುಗಳನ್ನು ಹೆಚ್ಚಿಸಿಕೊಳ್ಳುವಂತಾಯಿತು.

ಹಿಂದಿಗಿಂತಲೂ ಇಂದು ಒಟ್ಟಾರೆ ಪತ್ರಿಕೆಗಳ ಓದುಗರ ಸಂಖ್ಯೆ ಹೆಚ್ಚಿದೆ.ಪತ್ರಿಕೆಗಳ ಪುಟ ಸಂಖ್ಯೆಯೂ ಜಾಸ್ತಿಯಾಗಿದೆ.ವಾರಕ್ಕೊಮ್ಮೆ ಪ್ರಕಟವಾಗುತ್ತಿದ್ದ ಪುರವಣಿ ಪ್ರತಿನಿತ್ಯ ಬರತೊಡಗಿದೆ. ಆದರೆ ಜಾಹೀರಾತುಗಳಿಗೆ ಹೊರತಾಗಿದ್ದ ಪುರವಣಿಗಳಲ್ಲಿಯೂ ಅವು ಹೆಚ್ಚು ಹೆಚ್ಚಾಗಿ ಕಾಣಿಸಿಕೊಳ್ಳುತ್ತಿವೆ.

ಜಾಹೀರಾತುಗಳ ಮೂಲಕ ಪತ್ರಿಕೆಗಳಿಗೆ ಬರುವ ಆದಾಯ ಗಣನೀಯವಾಗಿ ಏರಿದ್ದರಿಂದಾಗಿ, ಪತ್ರಿಕೆಯ ಬೆಲೆ ಅದೇ ಅನುಪಾತದಲ್ಲಿ ಹೆಚ್ಚಾಗಿಲ್ಲ. ಹೀಗಾಗಿ ಓದುಗಗಿಂತಲೂ ಪತ್ರಿಕೆಗಳ ಪೋಷಕರು ಇಂದು ಜಾಹೀರಾತುದಾರರೇ ಆಗಿದ್ದಾರೆ. ಈ ಕಾರಣದಿಂದಾಗಿಯೇ ಸಾಂಸ್ಕೃತಿಕ ವಿಸ್ಮೃತಿ ಇಂದು ಮನೆ ಮಾಡಿದೆ ಎಂದು ಶ್ರೀ ಮೂರ್ತಿ ವಿಶ್ಲೇಷಿಸಿದರು.

ಅವರ ವಿಶ್ಲೇಷಣೆಯ ನಂತರ ಸಭಿಕರು ತುಂಬ ಉತ್ಸಾಹದಿಂದ ಚರ್ಚೆಯಲ್ಲಿ ಪಾಲುಗೊಂಡರು. ಸಮಯದ ಅಭಾವದಿಂದ ಚರ್ಚೆಯನ್ನು ಮಿತಿಗೊಳಿಸಬೇಕಾಯಿತು.

ಕಾರ್ಯಕ್ರಮದ ಮೊದಲಿಗೆ ಡಾ.ಪಿ.ವಿ.ನಾರಾಯಣ, ಅತಿಥಿಗಳ ಪರಿಚಯ ಮಾಡಿಕೊಟ್ಟುಅವರನ್ನೂ ಸಭಿಕರನ್ನು ಸ್ವಾಗತಿಸಿದರು.

ಕೊನೆಯಲ್ಲಿ ಡಾ॥ ವಿಜಯಾ ಸುಬ್ಬರಾಜ್ ಅವರು ವಂದನೆ ಸಲ್ಲಿಸಿದರು.

### ಕನ್ನಡ ಸಂಸ್ಕೃತಿ ದರ್ಶನ ಮಾಲೆ

ಈ ಮಾಲೆಯಡಿಯಲ್ಲಿ 16-4-2015 ರಿಂದ 11ನೇ ಡಿಸೆಂಬರ್ 2017ರವರೆಗೆ ಪ್ರತಿ ತಿಂಗಳು ಕನ್ನಡ ಭಾಷೆ, ನಾಡು, ನುಡಿ, ವ್ಯಕ್ತಿಚಿತ್ರಗಳು, ಹಾಗೂ ಇತರ ವಿಷಯಗಳ ಬಗ್ಗೆಯ ಸಾಕ್ಷ್ಯಚಿತ್ರಗಳನ್ನು ಪ್ರದರ್ಶಿಸಲಾಗುತ್ತಿತ್ತು. ಈ ಸರಣಿಯು ಇಲ್ಲಿಗೆ ಮುಕ್ತಾಯಗೊಂಡಿರುತ್ತದೆ.

## ಪರಿಚಯ

### ಜಿ.ಎನ್. ರಂಗನಾಥ ರಾವ್

ಜನನ:12.01.1942 ಶಿಕ್ಷಣ: ಬಿ.ಎ.ಪದವೀಧರ. 'ತಾಯಿನಾಡು' ದಿನ ಪತ್ರಿಕೆಯಲ್ಲಿ ಪತ್ರಿಕಾ ವ್ಯವಸಾಯ ಆರಂಭ (1964) 1964 ಜೂನ್ ನಿಂದ ಸಂಯುಕ್ತ ಕರ್ನಾಟಕ. 1967 ಪ್ರಜಾವಾಣಿಗೆ ಪದಾರ್ಪಣ. ಉಪ ಸಂಪಾದಕ, ವರದಿಗಾರ, ಸಾಪ್ತಾಹಿಕ ಪುರವಣಿ ಸಂಪಾದಕ, ಸುಧಾ–ಮಯೂರ ಸಹ ಸಂಪಾದಕ, ದೀಪಾವಳಿ–ಯುಗಾದಿ ವಿಶೇಷ ಸಂಚಿಕೆಗಳ ಸಂಪಾದಕ –ಹೀಗೆ 33ವರ್ಷಗಳ ಕಾಲ ಪ್ರಜಾವಾಣಿಯಲ್ಲಿ, ವಿವಿಧ ಹುದ್ದೆಗಳಲ್ಲಿ ಕಾರ್ಯ ನಿರ್ವಹಣೆ.1990ರಿಂದ ಪ್ರಜಾವಾಣಿ, ಸುಧಾ, ಮಯೂರಗಳ ಕಾರ್ಯನಿರ್ವಾಹಕ ಸಂಪಾದಕ. 2000ದಲ್ಲಿ ನಿವೃತ್ತಿ.

ಕಸ್ತೂರಿ: 2014 ಜನವರಿಯಿಂದ 2015 ಆಗಸ್ಟ್‌ವರೆಗೆ 'ಕಸ್ತೂರಿ' ಮಾಸ ಪತ್ರಿಕೆ ಸಂಪಾದಕ.

ಪತ್ರಿಕೋದ್ಯಮ ಪ್ರಾಧ್ಯಾಪಕ: 2000–2012 ಅವಧಿಯಲ್ಲಿ ಭಾರತೀಯ ವಿದ್ಯಾಭವನ ಕಾಲೇಜ್ ಆಫ್ ಮಾಸ್ ಕಮ್ಯುನಿಕೇಷನ್ ಮತ್ತು ಬೆಂಗಳೂರಿನ ಸರ್ಕಾರಿ ಕಲಾ ಕಾಲೇಜುಗಳಲ್ಲಿ ಪತ್ರಿಕೋದ್ಯಮ ಬೋಧನೆ.

ಕೃತಿಗಳು: ಎರಡು ಕಾದಂಬರಿಗಳು, ಎಂಟು ವಿಮರ್ಶಾ ಸಂಕಲನಗಳು, ಒಂದು ಕಥಾ ಸಂಕಲನ, ಒಂದು ನಾಟಕ ಸೇರಿದಂತೆ ಐವತ್ತಕ್ಕೂ ಹೆಚ್ಚು ಗ್ರಂಥಗಳ ಕರ್ತೃ. ಮುಖ್ಯ ಒಲವು:ಸಾಹಿತ್ಯ ವಿಮರ್ಶೆ. 'ಸಮುಚ್ಚಯ' ಸಮಗ್ರ ವಿಮರ್ಶೆ ಸಂಪುಟ.

ಅನುವಾದಗಳು: ಷೇಕ್ಸ್‌ಪಿಯರನ ರೋಮಿಯೋ ಜೂಲಿಯಟ್ ಮತ್ತು ಆಂಟನಿ ಕ್ಲಿಯೋಪಾಟ್ರ, ಬ್ರೆಕ್ಟನ ಚಾಕ್ ಸರ್ಕಲ್, ಕಾಫ್ಕ ಕಥೆಗಳು, ಟಾಲ್‌ಸ್ಟಾಯ್ ಕಥೆಗಳು, ಓ.ಹೆನ್ರಿ ಕಥೆಗಳು, ಡಿ.ಎಚ್.ಲಾರೆನ್ಸ್ ಕಥೆಗಳು, ಸೋಲ್ಜೆಟ್ಸಿನ್ ಕಾದಂಬರಿ, ಜೆ.ಡಿ.ಬರ್ನಾಲ್‌ನ ಸೋಶಿಯಲ್ ಸೈನ್ಸ್ ಇನ್ ಹಿಸ್ಟರಿ, ಖಲೀಲ್ ಗಿಬ್ರಾನ್ ಕಥೆಗಳು ಮತ್ತು ಜೆನ್ ಕಥೆ ಕಾವ್ಯ ಮೊದಲಾದವು.

ಭಾರತೀಯ ಕೃತಿಗಳು: ರಾಜ್ ಮೋಹನ್ ಗಾಂಧಿಯ ಮೋಹನ ದಾಸ್ ಎ ಟ್ರೂ ಸ್ಟೋರಿ, ರಾಮಚಂದ್ರ ಗುಹಾ ಅವರ 'ಇಂಡಿಯಾ ಆಫ್ಟರ್ ಗಾಂಧೀ', 'ಗಾಂಧಿ ಬಿಫೋರ್ ಇಂಡಿಯಾ', 'ಮೇಕರ್ಸ್ ಆಫ್ ಮಾಡ್ರನ್ ಇಂಡಿಯಾ', 'ಪೇಟ್ರಿಯಟ್ಸ್ ಅಂಡ್ ಪಾರ್ಟಿಸಾನ್ಸ್' ಮತ್ತು ನಾರಾಯಣ ಮೂರ್ತಿಯವರ 'ಎ ಬೆಟರ್ ಇಂಡಿಯಾ ಅಂಡ್ ಬೆಟರ್ ವರ್ಲ್ಡ್' ಮೊದಲಾದವು.

ಮಾನ್ಯತೆಗಳು: ಸಂದೇಶ್ ಪತ್ರಿಕೋದ್ಯಮ ಪ್ರಶಸ್ತಿ (1995), ಕರ್ನಾಟಕ ನಾಟಕ ಅಕಾಡೆಮಿ ಫೆಲೋಶಿಪ್ (1998), ಖಾದ್ರಿ ಶಾಮಣ್ಣ ಪತ್ರಿಕೋದ್ಯಮ ಪ್ರಶಸ್ತಿ(2009),ಕುವೆಂಪು ಭಾಷಾ ಭಾರತಿ ಪ್ರಶಸ್ತಿ(2011), ಟಿಯೆಸ್ಸಾರ್ ಸ್ಮಾರಕ ಪತ್ರಿಕೋದ್ಯಮ ಪ್ರಶಸ್ತಿ (2010), ಕರ್ನಾಟಕ ಮಾಧ್ಯಮ ಅಕಾಡೆಮಿ ಪ್ರಶಸ್ತಿ (2010), ಮಾಸ್ತಿ ಸಾಹಿತ್ಯ ಪ್ರಶಸ್ತಿ (2012), ಅನಕೃ ಸಾಹಿತ್ಯ ಪ್ರಶಸ್ತಿ (2013) ಮತ್ತು 'ಮೋಹನದಾಸ್ ಒಂದು ಸತ್ಯ ಕಥೆ' ಅನುವಾದಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಅನುವಾದ ಸಾಹಿತ್ಯ ಪ್ರಶಸ್ತಿ(2014).

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2018-2020
dt. 27-10-2017
Office of Posting: Bangalore PSO, Bangalore 560026
Price :Annual Subscription Rs. 20/-
Date of publishing and Posting : 30-01-2018

## ೨೦೧೮ ಜನವರಿ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ವಿವಿಧ ಹಂತದ ಸಂರಕ್ಷರಣಾ ಕಾರ್ಯವು ನಡೆಯುತ್ತಿದೆ. ೨೦೧೮ರ ಜನವರಿ ತಿಂಗಳಿನಲ್ಲಿ ೧ ಗ್ರಂಥಗಳ ಶುಷ್ಕ ಶುದ್ದೀಕರಣ, ಸೂಚಿ ತಯಾರಿಕೆ ೨, ಕಾಗದ ಹಸ್ತಪ್ರತಿಗಳ ಶುದ್ಧೀಕರಣ ೧೨ ಇವೆಲ್ಲಾ ಕಾರ್ಯಗಳು ನಡೆದಿವೆ.

ಪ್ರತಿಷ್ಠಾನದ ಹಸ್ತಪ್ರತಿಗಳ ಡಿಜಿಟಲೀಕರಣ

ಬೆಂಗಳೂರಿನ ಗರ್ಗೇಶ್ವರಿ ಡಿಜಿಟಲ್ ಫೌಂಡೇಷನ್ ಎಂಬ ಸಾರ್ವಜನಿಕ ಧಾರ್ಮಿಕ ದತ್ತಿ ಸಂಸ್ಥೆಯು, ಕಳೆದ ಹಲವು ವರ್ಷಗಳಿಂದಲೂ ಅಪರೂಪದ ಪ್ರಾಚೀನ ಹಸ್ತಪ್ರತಿಗಳನ್ನು (ಕಾಗದ ಮತ್ತು ತಾಳೆಗರಿ) ಹಲವಾರು ಸಂಸ್ಥೆಗಳಿಗೆ ಡಿಜಿಟಲೀಕರಣ ಸವಲತ್ತನ್ನು ನೀಡುತ್ತಾಬರುತ್ತಿದೆ.ನಮ್ಮ ಹಸ್ತಪ್ರತಿ ಭಂಡಾರಕ್ಕೂ ಭೇಟಿನೀಡಿ ನಮ್ಮಲ್ಲಿರುವ ಹಸ್ತಪ್ರತಿಗಳನ್ನು ಯಾವ ವಿಧವಾದ ಶುಲ್ಕವಿಲ್ಲದೆ ಡಿಜಿಟೈಸ್ ಮಾಡುವುದಾಗಿ ಭರವಸೆ ನೀಡಿ, ಕಾರ್ಯವನ್ನು ಪ್ರಾರಂಭಿಸಿದ್ದಾರೆ. ಸಮಗ್ರವಾಗಿ ಪ್ರತಿಷ್ಠಾನಕ್ಕೆ ಒಂದು ಪ್ರತಿಯನ್ನು ನೀಡುವುದಾಗಿ ತಿಳಿಸಿದ್ದಾರೆ.

### ಗ್ರಂಥಾಲಯದ ಕಾರ್ಯ

ಪ್ರತಿಷ್ಠಾನದ ಗ್ರಂಥಾಲಯದಲ್ಲಿ ಹೆಚ್ಚುವರಿ ಪುಸ್ತಕಗಳನ್ನು (ದ್ವಿಪ್ರತಿ, ತ್ರಿಪತಿ) ಗುರುತಿಸಿ, ಅವುಗಳ ಪಟ್ಟಿಯನ್ನು ತಯಾರಿಸುವ ಕಾರ್ಯ ನಡೆಯುತ್ತಿದೆ.ಸಂಶೋಧನಾ ಸಂಸ್ಥೆಗಳಿಗೆ, ಕಾಲೇಜುಗಳಿಗೆ ಮತ್ತು ವಿಶ್ವವಿದ್ಯಾಲಯಗಳಿಗೆ ಉಪಯೋಗವಾಗುವಂತಹ ಪುಸ್ತಕಗಳನ್ನು, ಪಟ್ಟಿಮಾಡಿ, ಈಗಾಗಲೇ ಹಲವು ಸಂಸ್ಥೆಗಳು ನಮ್ಮಿಂದ ಪುಸ್ತಕಗಳನ್ನು ಸ್ವೀಕರಿಸಿವೆ. ಕೆಲವು ಕಾಲೇಜುಗಳಿಂದ ಪುಸ್ತಕಗಳಿಗಾಗಿ ಮನವಿ ಪತ್ರಗಳೂ ಬಂದಿವೆ. ಈ ಕಾರ್ಯವು ಫೆಬ್ರವರಿ ಅಂತ್ಯದಲ್ಲಿ ಮುಗಿಯುವ ನಿರೀಕ್ಷೆಯಿದೆ.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ–ಅಂಚೆ

ಶ್ರೀಮತಿ/ಶ್ರೀ.......................................................................................

.......................................................................................

.......................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭